







# ಕೀರ್ತನ ದರ್ಪಣ

## (ಪ್ರಾಯೋಗಿಕ ಸಂಗೀತಶಾಸ್ತ್ರ)

*

## ಸಂಪುಟ ೧





ಸಂಪಾದಕರು:
* ವಿ. ರಾಮರತ್ನಂ
* ಎಂ.ವಿ. ರತ್ನ
* ಆರ್.ಎಲ್. ಅನಂತರಾಮಯ್ಯ

ಸತ್ಯ ಪುಸ್ತಕ ಮಾಲೆ–೬೬

# ಕೀರ್ತನ ದರ್ಪಣ–೧



With best wishes to Rama
V Ramaratnam
5/3/1992

ಪಠ್ಯಪುಸ್ತಕ ಮಾಲೆ–೭೩

# ಕೀರ್ತನ ದರ್ಪಣ

(ಪ್ರಾಯೋಗಿಕ ಸಂಗೀತಶಾಸ್ತ್ರ : ಸಂಪುಟ ೧)


ಸಂಪಾದಕರು :

ಪ್ರೊ. ವಿ. ರಾಮರತ್ನಂ

ಎಂ. ವಿ. ರತ್ನ

ಆರ್. ಎಲ್. ಅನಂತರಾಮಯ್ಯ




1974

KIRTANA DARPANA, Vol. I, compiled and edited by Prof. V. Ramaratnam, Smt. M. V. Ratna and Sri R. L. Anantharamaiah, first published in 1974 by the Director, Prasaranga, University of Mysore, crown quarto, pp. viii+208, Price Rs. 12-50



ಮೊದಲನೆಯ ಮುದ್ರಣ 1974

ಬೆಲೆ : ರೂ. 12-50

ಮುದ್ರಣ : ಶ್ರೀ ರಘುವೀರ್ ಪ್ರಿಂಟಿಂಗ್ ಪ್ರೆಸ್, ಮೈಸೂರು-4
ಪ್ರಕಾಶಕ : ಡೈರೆಕ್ಟರ್, ಪ್ರಸಾರಾಂಗ, ಮೈಸೂರು - 570012

# ಅರಿಕೆ

ಮೈಸೂರು ವಿಶ್ವವಿದ್ಯಾನಿಲಯದ ಪ್ರಕಾಶನ ಸಮಿತಿಯ ಅಧ್ಯಕ್ಷರಾದ ರಾಷ್ಟ್ರಕವಿ ಕುವೆಂಪು ಅವರು, ಕರ್ನಾಟಕ ಸಂಗೀತವನ್ನು ಕಲಿಯುವ ವಿದ್ಯಾರ್ಥಿಗಳಿಗೆ ಕನ್ನಡಭಾಷೆಯಲ್ಲಿಲ್ಲದ ಕೃತಿಗಳ ಶುದ್ಧ ಸಾಹಿತ್ಯವನ್ನು ಅರ್ಥ, ಸಾರಾಂಶ, ಸ್ವರಪ್ರಸ್ತಾರಗಳೊಂದಿಗೆ ಒದಗಿಸ ಬೇಕಾಗಿರುವ ಆವಶ್ಯಕತೆಯನ್ನು ಮನಗಂಡು ಅಂಥ ಪ್ರಯತ್ನವನ್ನು ಕೈಗೊಳ್ಳಬೇಕೆಂದು ಸೂಚಿಸಿದರು. ಆ ಸೂಚನೆಯ ಮೇರೆಗೆ ತೆಲುಗು, ಸಂಸ್ಕೃತ, ತಮಿಳು ಮೊದಲಾದ ಭಾಷೆಗಳಲ್ಲಿ ರಚಿತವಾಗಿರುವ ಸುಪ್ರಸಿದ್ಧ ಕೀರ್ತನೆಗಳ ಶುದ್ಧರೂಪವನ್ನೂ, ಅವುಗಳಿಗೆ ಅರ್ಥ, ಸಾರಾಂಶ ಮುಂತಾದ ಸಹಾಯಕ ಸಾಮಗ್ರಿಯನ್ನೂ ಕೊಡುವ ಯೋಜನೆ ಹಾಕಿಕೊಂಡೆವು. ಇದಕ್ಕೆ ಆಧಾರವಾಗಿ ಲಲಿತ ಕಲೆಗಳ ಕಾಲೇಜಿನಲ್ಲಿಯೂ, ಇತರ ಸಂಗೀತ ಶಿಕ್ಷಣ ಸಂಸ್ಥೆಗಳಲ್ಲಿಯೂ ಇರುವ ಪಾಠ್ಯಕ್ರಮವನ್ನು ಇಟ್ಟುಕೊಳ್ಳಲಾಗಿದೆ. ಪ್ರಿ-ಯೂನಿವರ್ಸಿಟಿ ಹಂತದ ಶಿಕ್ಷಣ ಕ್ರಮದಲ್ಲಿ ಬೋಧಿಸುವ ರಾಗಗಳಿಗೆ ಪ್ರತಿಯೊಂದಕ್ಕೂ ಮೂರು ಮೂರು ಕೃತಿಗಳನ್ನು ಆರಿಸಿ ಇಲ್ಲಿ ಕೊಟ್ಟಿದೆ. ಮುಂದಿನ ಸಂಪುಟದಲ್ಲಿ ಬಿ. ಮ್ಯೂಸಿಕ್ ತರಗತಿಯ ಹಂತದ ಪಾಠ್ಯಭಾಗವನ್ನು ಸೇರಿಸಲಾಗುತ್ತದೆ. ಇದರಿಂದ ಸರಕಾರದ ಶಿಕ್ಷಣ ಇಲಾಖೆಯು ನಡೆಸುವ ಸಂಗೀತ ಪರೀಕ್ಷೆಗಳ ಖಾಸಗಿ ವಿದ್ಯಾರ್ಥಿಗಳಿಗೂ, ವಿಶ್ವವಿದ್ಯಾನಿಲಯದ ಲಲಿತಕಲೆಗಳ ಕಾಲೇಜಿನಲ್ಲಿ ಓದುತ್ತಿರು ವವರಿಗೂ, ಸಾಮಾನ್ಯ ಸಂಗೀತ ಅಭ್ಯಾಸಿಗಳಿಗೂ ಸಹಾಯವಾಗುತ್ತದೆಂದು ಆಶಿಸಲಾಗಿದೆ. ಈ ಸಂಪುಟಗಳನ್ನು ಸಿದ್ಧಪಡಿಸಲು ಆದೇಶ ನೀಡಿ ಅವಕಾಶಮಾಡಿಕೊಟ್ಟ ಪ್ರಸಾರಾಂಗದ ನಿರ್ದೇಶಕರಾದ ಡಾ. ಪ್ರಭುಶಂಕರ ಅವರಿಗೆ, ಅವರ ಸಹೋದ್ಯೋಗಿಗಳಿಗೆ, ಸಂಪಾದನ ಸಹಾಯಕರಾದ ಶ್ರೀ ಡಿ. ಕೆ. ಈರೇಗೌಡರಿಗೆ, ಕೃತಿಯ ಸೌಂದರ್ಯವನ್ನು ಹೆಚ್ಚಿಸಲು ಸೊಗಸಾದ ರೇಖಾಕೃತಿಗಳನ್ನು ಮಾಡಿಕೊಟ್ಟ ಶ್ರೀ ಕೆ. ಎಲ್. ವೆಂಕಟೇಶ್, ಛಾಯಾ ಚಿತ್ರಗಳನ್ನು ಒದಗಿಸಿದ ಶ್ರೀ ಅಬ್ರಹಾಂ, ಆಸಕ್ತಿಯಿಂದ ಅವುಗಳನ್ನು ಅಚ್ಚುಮಾಡಿಕೊಟ್ಟ ವೆಸ್ಲಿ ಪ್ರೆಸ್ಸಿನ ಅಧಿಕಾರಿಗಳು ಮುಖ್ಯವಾಗಿ ಶ್ರೀ ನಾರಾಯಣರಾವ್ ಇವರೆಲ್ಲರಿಗೂ ವಂದನೆಗಳು ಸಲ್ಲುತ್ತವೆ. ಮೈಸೂರಿನ ಬಿಡಾರಂ ಕೃಷ್ಣಪ್ಪನವರ ಶ್ರೀ ಪ್ರಸನ್ನ ಸೀತಾರಾಮ ಮಂದಿರದ ವ್ಯವಸ್ಥಾಪಕರು ಅಲ್ಲಿರುವ ಕೆಲವು ವರ್ಣಚಿತ್ರಗಳ ಛಾಯಾಪ್ರತಿ ತೆಗೆದುಕೊಳ್ಳಲು ಅನುಮತಿ ಕೊಟ್ಟಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು.

ಈ ಕೃತಿಯನ್ನು ಮುದ್ರಿಸಿಕೊಡಲು ಶ್ರೀ ರಘುವೀರ್ ಪ್ರಿಂಟಿಂಗ್ ಪ್ರೆಸ್ ಒಡೆಯರಾದ ಶ್ರೀ ಜಿ. ಆರ್. ದಾಸಪ್ಪನವರು ಪಟ್ಟಿರುವ ಕಷ್ಟ ಅಷ್ಟಿಷ್ಟಲ್ಲ. ಅನಾರೋಗ್ಯವನ್ನೂ ಕಡೆಗಣಿಸಿ ತಮ್ಮ ಒಲವಿನ ವಿಷಯವಾದ ಸಂಗೀತ ಪುಸ್ತಕ ಸಾಧ್ಯವಾದಷ್ಟು ನಿರ್ದೋಷವಾಗಿ ಪ್ರಕಟವಾಗ ಬೇಕೆಂಬ ಆಸೆಯಿಂದ ಅವರು ಬಹಳ ದುಡಿದಿದ್ದಾರೆ. ಅವರಿಗೂ ಅವರ ಸಿಬ್ಬಂದಿ ವರ್ಗಕ್ಕೂ ನಮ್ಮ ವಂದನೆಗಳು.

—ಸಂಪಾದಕರು

# ಪರಿವಿಡಿ

# ಪ್ರವೇಶ

ಸಾಹಿತ್ಯ ಮತ್ತು ಸಂಗೀತ ಆತ್ಮೀಯ ಒಡನಾಡಿಗಳು. ಸರಸ್ವತಿಯ ಎರಡು ಕಣ್ಣುಗಳೆಂದು ಅವು ಪ್ರಸಿದ್ಧವಾಗಿವೆ. ಸಂಗೀತದ ಭಾವಪುಷ್ಟಿಗೆ, ಅರ್ಥವ್ಯಕ್ತಿ ರಸಾನುಭೂತಿಗಳಿಗೆ ಸಾಹಿತ್ಯದ ಸಾಂಗತ್ಯ ಅನಿವಾರ್ಯ ಅಗತ್ಯ. ಆದರೆ ದುರದೃಷ್ಟಕ್ಕೆ, ಬಾಯಿಂದ ಬಾಯಿಗೆ ಹಾದು ಬರುವಾಗ ಸಾಹಿತ್ಯ ರೂಪಗಳು ಕೆಟ್ಟು ಎಷ್ಟೋವೇಳೆ ಅಭಾಸಕಾರಕವಾಗಿ ಕಾಣುವುದುಂಟು. ಅಪದ್ಧ ಸಾಹಿತ್ಯ ಪ್ರಯೋಗ ಕಿವಿಗೆ ಬಿದ್ದಾಗ ಅಪಸ್ವರ ಕೇಳಿದಷ್ಟೇ ಹಿಂಸೆಯಾಗುತ್ತದೆ. ಆದ್ದರಿಂದ ನಮ್ಮ ವಿದ್ಯಾರ್ಥಿಗಳು ಶಾಸ್ತ್ರೀಯವಾಗಿ ಸಂಗೀತ ಕಲಿಯುವಾಗ ಮಹಾ ವಾಗ್ಗೇಯಕಾರರು ರಚಿಸಿದ ಕೃತಿಗಳ ಶುದ್ಧರೂಪವನ್ನು ಕಲಿಯಬೇಕು ಎಂಬ ಹಿರಿದಾಶೆಯಿಂದ ಈ ಸಂಪುಟಗಳನ್ನು ಸಿದ್ಧಪಡಿಸುವ ಯೋಜನೆಯನ್ನು ಹಾಕಿಕೊಳ್ಳಲಾಗಿದೆ.

ತಮಿಳು, ತೆಲುಗು, ಮಲೆಯಾಳ ಭಾಷೆಗಳಲ್ಲಿ ವಾಗ್ಗೇಯಕಾರರ ಕೃತಿಗಳನ್ನು ಸಂಪಾದಿಸಿ ಪ್ರಸ್ತಾರಸಹಿತ ಪ್ರಕಟಿಸಿರುವ ಬೇಕಾದಷ್ಟು ಕೃತಿಗಳಿವೆ. ಸ್ವಾತಿ ತಿರುನಾಳ್ ಕೃತಿ ಪ್ರಕಟಣ ಸಮಿತಿ, ತ್ರಿವೇಂದ್ರಂ; ಮ್ಯೂಸಿಕ್ ಅಕಾಡಮಿ, ಮದರಾಸು; ತಿರುಪತಿಯ ದೇವಸ್ಥಾನ ಪ್ರಕಟನಾ ಮಂಡಲಿ ಮುಂತಾದುವು ಇಂಥ ಕೆಲವು. ಗಾಯಕಲೋಚನಂ, ಗಾನೇಂದುಶೇಖರಂ, ಗಾಯಕಸಿದ್ಧಾಂತಂ, ಗಾನಭಾಸ್ಕರ, ಸಂಗೀತ ರತ್ನಾವಳಿ, ಸಂಗೀತ ಸುಧಾಂಬುಧಿ, ಸಂಗೀತಕಲಾ ಪ್ರದರ್ಶಿನಿ ಮುಂತಾದ ಹಲವಾರು ಸಂಕಲನಗಳು ಈ ಉಪಯುಕ್ತ ಕೆಲಸವನ್ನು ಮಾಡಿವೆ. ಸ್ವರಪ್ರಸ್ತಾರ ಸಹಿತವಾಗಿ ಕೃತಿಗಳನ್ನು ಅಚ್ಚು ಮಾಡುವುದೇ ಕಷ್ಟದ ಕೆಲಸ, ಈ ಅತ್ಯಂತ ಸೂಕ್ಷ್ಮವೂ ಕರಾರುವಾಕ್ಕಾದುದೂ ಆದ ಕೆಲಸವನ್ನು ಅನೇಕ ಕೃತಿಗಳಲ್ಲಿ ಕಾಣಬಹುದು. ಕನ್ನಡದಲ್ಲಿ ಇಂತಹ ಕೆಲಸ ನಡೆದಿರುವುದು ಬಹಳ ಕಡಿಮೆ. ಮೈಸೂರು ಕೆ. ವಾಸುದೇವಾಚಾರ್ಯರು, ಬಿ. ಕೆ. ಪದ್ಮನಾಭರಾಯರು, ಗಾನಕಲಾಸಿಂಧು ಎನ್. ಚನ್ನಕೇಶವಯ್ಯನವರು, ಗಾನವಿದ್ಯಾಸಾಗರ ಆರ್. ಆರ್. ಕೇಶವಮೂರ್ತಿಯವರು, ವೀಣಾ ವಿದ್ವಾನ್ ಎಲ್. ರಾಜಾರಾಯರು, ರಾಳ್ಳಪಳ್ಳಿ ಅನಂತಕೃಷ್ಣಶರ್ಮರು, ಬೆಳಕವಾಡಿ ಶ್ರೀನಿವಾಸಯ್ಯಂಗಾರ್ಯರು ಮತ್ತು ಮಕ್ಕಳು, ಶ್ರೀ ತಿಟ್ಟೆ ಕೃಷ್ಣಯ್ಯಂಗಾರ್ಯರು ಮುಂತಾದ ಅನೇಕ ಜನ ಮಹನೀಯರು ವೈಯಕ್ತಿಕ ಹಂತದಲ್ಲಿ ಗಣನೀಯ ಪ್ರಮಾಣದಲ್ಲಿ ಕೆಲಸ ಮಾಡಿದ್ದಾರೆ. ಮೈಸೂರಿನ ಸಂಗೀತ ಕಲಾಭಿವರ್ಧಿನೀ ಸಭಾ ಹಾಗೂ ಬೆಂಗಳೂರಿನ ಕರ್ನಾಟಕ ಗಾನಕಲಾ ಪರಿಷತ್ತು, ಗುರುಗುಹ ಗಾನನಿಲಯ ಇವು ತಮ್ಮ ಅಮೂಲ್ಯ ಪ್ರಕಾಶನಗಳ ಮೂಲಕ ಈ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿವೆ.

ಲಲಿತಕಲಾ ಕಾಲೇಜಿನ ಹಾಗೂ ಇತರ ಕಾಲೇಜುಗಳ ವಿದ್ಯಾರ್ಥಿಗಳು ಪ್ರೀ-ಯೂನಿವರ್ಸಿಟಿ, ಬಿ.ಮ್ಯೂಸಿಕ್, ಎಂ.ಮ್ಯೂಸಿಕ್ ತರಗತಿಗಳಲ್ಲಿ ಕಲಿಯಬೇಕಾಗಿರುವ ಪಾಠ್ಯಕ್ರಮವನ್ನು ಗಮನದಲ್ಲಿಟ್ಟುಕೊಂಡು ಸಾಕಷ್ಟು ಆಯ್ಕೆಯ ಅವಕಾಶವಿರುವ ಹಾಗೆ ಪ್ರತಿಯೊಂದು ರಾಗದಲ್ಲಿಯೂ ಮೂರು ಮೂರು ಕೃತಿಗಳನ್ನು ಸ್ವರಪ್ರಸ್ತಾರ ಸಹಿತ, ಅರ್ಥ ತಾತ್ಪರ್ಯ ಸಹಿತ ಕನ್ನಡ ಲಿಪಿಯಲ್ಲಿ ಸಂಪುಟಗಳಾಗಿ ಪ್ರಕಟಿಸಬೇಕೆಂಬುದು ನನ್ನ ಅಪೇಕ್ಷೆ. ಅಲ್ಲದೆ ಪದಶಃ ಅರ್ಥವನ್ನು ತಿಳಿಯದೆ ಹಾಡುವಾಗ ಪದ ವಿಭಜನೆ ತಪ್ಪಾಗಿ ಅರ್ಥವ್ಯಕ್ತಿ ಕೆಡುತ್ತದೆ. ಅದಕ್ಕೆ ಅವಕಾಶವಾಗದಂತೆ ಸಾಧ್ಯವಾದಮಟ್ಟಿಗೆ ಅನ್ವಯಕ್ರಮದಲ್ಲಿ ಅರ್ಥವನ್ನು ಕೊಟ್ಟಿದೆ.

ಪ್ರತಿಯೊಂದು ಕೃತಿಗೂ ಮೊದಲು ಸಾಹಿತ್ಯವನ್ನು ಕೊಟ್ಟು, ಆಮೇಲೆ ಅನ್ವಯಕ್ರಮದಲ್ಲಿ ಪ್ರತಿಪದಾರ್ಥವನ್ನು ನಿರೂಪಿಸಿ, ಸಾರಾಂಶವನ್ನು ಕೊಟ್ಟು ಆಮೇಲೆ ಸ್ವರ ಪ್ರಸ್ತಾರವನ್ನು ಕೊಟ್ಟಿದೆ. ಇದು ವಿದ್ಯಾರ್ಥಿಗಳಿಗೂ, ಸಂಗೀತ ಪ್ರೇಮಿಗಳಿಗೂ ತುಂಬ ಉಪಯುಕ್ತವಾಗುತ್ತದೆಂದು ಆಶಿಸುತ್ತೇನೆ. ಈಗಾಗಲೇ ಮೈಸೂರು ವಿಶ್ವವಿದ್ಯಾನಿಲಯ ಕರ್ನಾಟಕ ಸಂಗೀತದ ತಾತ್ವಿಕ ಕ್ಷೇತ್ರದಲ್ಲಿ ಕರ್ನಾಟಕ ಸಂಗೀತ ಸುಧಾ, ಸಂಗೀತ ದರ್ಪಣ ಮುಂತಾದ ಕೃತಿಗಳನ್ನು ಪ್ರಕಟಿಸಿದೆ. ಪ್ರಾಯೋಗಿಕ ಕ್ಷೇತ್ರದಲ್ಲಿ ಈ ಕೃತಿ ಸಂಪುಟಗಳು ಉಪಯುಕ್ತವಾಗುತ್ತವೆಂದು ಆಶಿಸಿದೆ. ಈ ಮಾಲಿಕೆಯ ಎರಡನೆಯ ಸಂಪುಟವು ಬಿ. ಮ್ಯೂಸಿಕ್ ಪದವಿ ತರಗತಿಯ ಪಾಠ್ಯಭಾಗವನ್ನು ಒಳಗೊಳ್ಳುತ್ತದೆ. ಅದು ಈಗ ಮುದ್ರಣಕ್ಕೆ ಸಿದ್ಧವಾಗುತ್ತಿದೆ. ಮೂರನೆಯ ಸಂಪುಟದಲ್ಲಿ ಎಂ. ಮ್ಯೂಸಿಕ್ ಸ್ನಾತಕೋತ್ತರ ಪದವಿಯ ಪಾಠ್ಯಭಾಗ ಸೇರಿರುತ್ತದೆ. ಈಗ ಒಂದೊಂದು ರಾಗದಲ್ಲೂ ಮೂರು ಅಥವಾ ನಾಲ್ಕು ಕೃತಿಗಳನ್ನು ಮಾತ್ರ ಕೊಟ್ಟಿರುವುದರಿಂದ, ಮುಂದೆ ಇವೇ ರಾಗಗಳಲ್ಲಿ ಇನ್ನೂ ಹತ್ತಾರು ಕೃತಿಗಳನ್ನು ಶುದ್ಧರೂಪದಲ್ಲಿ ಒದಗಿಸಿ ಅಭ್ಯಾಸಿಗಳಿಗೆ ಆಯ್ಕೆಯ ಅವಕಾಶವನ್ನು ವಿಸ್ತಾರವಾಗುವಂತೆ ಮಾಡಬೇಕೆಂಬ ಅಪೇಕ್ಷೆ ಇದೆ.

ಈ ಸಂಪುಟದಲ್ಲಿ ಆರಿಸಿಕೊಂಡಿರುವ ಕೃತಿಗಳಿಗೆ ಉಪಯೋಗಿಸಿರುವ ಆಕರಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಸೂಚಿಸಿದೆ :

| | | |
|---|---|---|
| 1. | ಸಂಗೀತ ಸಂಪ್ರದಾಯ ಪ್ರದರ್ಶಿನಿ | ಸುಬ್ಬರಾಮ ದೀಕ್ಷಿತರು |
| 2. | ಗಾನಭಾಸ್ಕರ | ಕೆ. ವಿ. ಶ್ರೀನಿವಾಸ ಅಯ್ಯಂಗಾರ್ |
| 3. | ಪಲ್ಲವಿ ಸ್ವರಕಲ್ಪವಲ್ಲಿ | ವೀಣಾ ಕುಪ್ಪಯ್ಯರ್ |
| 4. | ತ್ಯಾಗರಾಜ ಹೃದಯ (3 ಭಾಗಗಳು) | ಕೆ. ವಿ. ಶ್ರೀನಿವಾಸ ಅಯ್ಯಂಗಾರ್ |
| 5. | ಸಂಗೀತ ಸುಧಾಂಬುಧಿ | |
| 6. | ಸಂಗೀತ ರತ್ನಾವಳಿ | |

* * * * *

ಪ್ರಸ್ತುತ ಸಂಪುಟದಲ್ಲಿ 18 ರಾಗಗಳಿಗೆ ಸೇರಿದ ಒಟ್ಟು 54 ಕೃತಿಗಳನ್ನು ಆರಿಸಿದೆ. ಆ ರಾಗಗಳ ಸ್ಥೂಲ ಲಕ್ಷಣ ಪರಿಚಯವನ್ನು ಇಲ್ಲಿ ಮಾಡಿದೆ.

## 1. ಕಲ್ಯಾಣಿ

ಆ. ಸ ರಿ ಗ ಮ ಪ ದ ನಿ ಸ<br>
ಅ. ಸ ನಿ ದ ಪ ಮ ಗ ರಿ ಸ

65ನೇ ಮೇಳಕರ್ತರಾಗ. ಕಟಪಯಾದಿ ಸೂತ್ರಕ್ಕೆ ಹೊಂದುವಂತೆ ಮೇಚ ಎಂಬ ಶಬ್ದವನ್ನು ಸೇರಿಸಿ ಮೇಚಕಲ್ಯಾಣಿ ಎಂದು ಕರೆದಿದ್ದಾರೆ. ಸಂಪೂರ್ಣರಾಗ. 11ನೇ ಚಕ್ರದಲ್ಲಿ 5ನೇ ರಾಗ. ಷಡ್ಜ, ಚತುಶ್ರುತಿ ಋಷಭ, ಅಂತರ ಗಾಂಧಾರ, ಪ್ರತಿಮಧ್ಯಮ, ಪಂಚಮ, ಚತುಶ್ರುತಿ ಧೈವತ, ಕಾಕಲಿ ನಿಷಾದ ಇವು ಈ ರಾಗದ ಸ್ವರಗಳು. ಪ್ರಸಿದ್ಧ ಪ್ರತಿಮಧ್ಯಮ ರಾಗ. ಸರ್ವಸ್ವರಗಳೂ ರಾಗಛಾಯಾ ಸ್ವರಗಳು. ಜಂಟಿಸ್ವರ ಮತ್ತು ದಾಟುಸ್ವರ ಸರ್ವಸ್ವರ ಗಮಕ ವರೀಕಯುಕ್ತ ರಕ್ತಿರಾಗ. ಸಾರ್ವಕಾಲಿಕರಾಗ ಆದರೂ ಸಾಯಂಕಾಲದ ಹಾಡಿಕೆಯಲ್ಲಿ ಅತಿ ರಮಣೀಯ. ಪ್ರಯೋಗಗಳು ರಂಜನೀಯವಾಗಿರುತ್ತವೆ.

| | | | | |
|---|---|---|---|---|
| ಕೆಲವು ರಚನೆಗಳು : | ಗೀತ | ಕಮಲಜದಳ | ತ್ರಿಪುಟ | ಪುರಂದರದಾಸರು |
| | ವರ್ಣ | ವನಜಾಕ್ಷಿ | ಆದಿ | |
| | | ವನಜಾಕ್ಷ | ಅಟ್ಟ | ವೀಣಾ ಕುಪ್ಪಯ್ಯರ್ |
| | ಕೃತಿ | ನಿಧಿಚಾಲ ಸುಖಮಾ | ಛಾಪು | ತ್ಯಾಗರಾಜರು |
| | | ಶಿವೇ ಪಾಹಿಮಾಂಬಿಕೆ | ಆದಿ | ,, |
| | | ಸುಂದರಿ ನೀ | ಆದಿ | ,, |
| | - | ಅಮ್ಮ ರಾವಮ್ಮ | ಝಂಪೆ | ,, |
| | | ಕಮಲಾಂಬಾಂ | ಆದಿ | ಮುತ್ತುಸ್ವಾಮಿ ದೀಕ್ಷಿತರು |
| | | ಭಜರೇರೇ ಚಿತ್ತ | ಛಾಪು | ,, |
| | | ಹಿಮಾದ್ರಿಸುತೇ | ರೂಪಕ | ಶ್ಯಾಮಾಶಾಸ್ತ್ರಿಗಳು |
| | | ಬಿರಾನ ವರಾಲಿಚ್ಚಿ | ರೂಪಕ | ,, |
| | | ನಿಜದಾಸ ವರದ | ಆದಿ | ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ |
| | | ಕಲ್ಲುಸಕ್ಕರೆ ಕೊಳ್ಳಿರೋ | ಛಾಪು | ಪುರಂದರದಾಸರು |

ಸಂಚಾರ : ಸನಿಧಾನಿರಿಗಾ ಗರಿನಿರಿಗರೀ ಗಮಪಗಾರಿ ಗಮಧಮಗರಿಸಾ ಪಮಗರಿಸಾ ಗರಿಗಮನಿದಮಗರೀ ಪಮಗಮಪಾ ಗಗದದನಿನಿರಿರಿಗರಿಸಾ ಗರಿರಿಗರಿರಿಗಾ ಪಮಗರಿಗಾ ಗರಿಮಾಗರಿಸಾ ನಿಸರಿಗಾರಿ ಸನಿದಾಪಾಮ ಗಮಪಾಗಾ ಗಮರೀ ಗಮಪಾನಿದಪಮಗರೀ ಗರಿಮಾಗರಿಸಾ ಸನಿಧನಿರೀ ಧನಿನಿನಿಧಧಾ ಧಾನೀಗರಿಸಾ.

2. ಕೇದಾರ

ಆ. ಸ ಮ ಗ ಮ ಪ ನಿ ಸ
ಅ. ಸ ನಿ ಪ ಮ ಗ ರಿ ಸ

29ನೇ ಮೇಳ ಧೀರಶಂಕರಾಭರಣ ಜನ್ಯ. ವಕ್ರಷಾಡವ–ಔಡವ. ಗಮಗ ವರೀಕ ರಕ್ತಿರಾಗ. ದ್ವಿತೀಯ ಘನಪಂಚಕಕ್ಕೆ ಸೇರಿದ್ದು. ರಿ ದ ಆರೋಹಣದಲ್ಲಿಯೂ, ಧೈವತವು ಅವರೋಹಣದಲ್ಲಿಯೂ ವರ್ಜ್ಯ. ಮ ನಿ ಗಳು ರಾಗಛಾಯಾ ಸ್ವರಗಳು. ಸಗಮಪ, ಪಾಪಸಾನಿಪಾ, ಸರಿರಿಗಾಸ ಇವು ವಿಶೇಷ ಪ್ರಯೋಗಗಳು. ಷಡ್ಜ, ಚತುಶ್ರುತಿ ರಿಷಭ, ಅಂತರ ಗಾಂಧಾರ, ಶುದ್ಧ ಮಧ್ಯಮ, ಪಂಚಮ, ಮತ್ತು ಕಾಕಲಿ ನಿಷಾದ ಇವು ಈ ರಾಗದ ಸ್ವರಸ್ಥಾನಗಳು.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ರಾಮಾ ನೀಪೈ | ಆದಿ | ತ್ಯಾಗರಾಜರು |
| | | ಮರಚೇವಾಡನಾ | ಆದಿ | ,, |
| | | ಆನಂದನಟನ | ಖಂಡ ಏಕ | ದೀಕ್ಷಿತರು |

ಸಂಚಾರ : ಪನಿನಿಸಾ ಸಮಗಮಪ ಮಗಮಪನಿಸಾ ಸಮಗರಿಸಾ ಸರಿರಿಗಾಸ ಸನಿಪಾಮ ಗಮಪನಿ ಪಸಸಾನಿಪಾಮ ಗಮಪನಿಪಾಮ ಮಗರಿಗಸಾ ಸನಿಪನಿ ಸಮಗಮಪ ಸನಿಪಮಗರಿ ಸರಿಗಾಸ.

3. ಕೇದಾರಗೌಳ

ಆ. ಸ ರಿ ಮ ಪ ನಿ ಸ
ಅ. ಸ ನಿ ದ ಪ ಮ ಗ ರಿ ಸ

ಈ ರಾಗವು 28ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ. ಉಪಾಂಗ. ಔಡವ–ಸಂಪೂರ್ಣ. ರಕ್ತಿರಾಗ. ಆರೋಹಣದಲ್ಲಿ ಗಾಂಧಾರ ಮತ್ತು ಧೈವತ ವರ್ಜ್ಯ. ಗಮಕ ವರೀಕ ರಕ್ತಿರಾಗ. ರಿ ಮತ್ತು ನಿ ಗಳು ರಾಗಛಾಯಾ ಸ್ವರಗಳು. ತ್ರಿಸ್ಥಾಯಿ ರಾಗ. ಷಡ್ಜ ಮತ್ತು ಪಂಚಮಗಳಲ್ಲದೆ ಚತುಶ್ರುತಿ ರಿಷಭ, ಅಂತರಗಾಂಧಾರ, ಶುದ್ಧಮಧ್ಯಮ, ಚತುಶ್ರುತಿ ಧೈವತ, ಕೈಶಿಕಿ ನಿಷಾದ ಇವು ಈ ರಾಗದ ಸ್ವರಗಳು. ವೆಂಕಟಮಖಿಯವರ ಪ್ರಕಾರ ಹರಿಕೇದಾರಗೌಳ ಎಂದು ಹೆಸರು.

| | | | | |
|---|---|---|---|---|
| ಕೆಲವು ರಚನೆಗಳು : | ವರ್ಣ | ಸಾಮಿದಯಲೇಕ | ಆದಿ | |
| | ,, | ನಿರಬೋಣಿ | ಝುಂಪೆ | ರುದ್ರಪಟ್ಣಂ ವೆಂಕಟರಾಮಯ್ಯ |
| | ಕೃತಿ | ತುಳಸೀ ಬಿಲ್ವ | ಆದಿ | ತ್ಯಾಗರಾಜರು |
| | | ನೀಲಕಂಠಂ | ರೂಪಕ | ದೀಕ್ಷಿತರು |
| | | ಸರಗುಣಪಾಲಿಂಪ | ಆದಿ | ರಾಮನಾಡ್ ಶ್ರೀನಿವಾಸಯ್ಯಂಗಾರ್ |

ಸಂಚಾರ : ರಿಮಪಾಪ ದಪಮಗರಿ ಮಪಸನಿಸಾ ದಪಮಪಾ ಮಪಸನಿದಪಾ ರಿಪಮಾಗರಿ ರೀಗರೀಸ ನಿಸರಿಮಪ ನಿದಪಮಾಪನೀ ನಿಸರಿಮಾಗರಿ ಗಾರಿಸನಿರಿಸ ದಪಾಮಗರಿಸಾ ರಿಸಾನಿಧ ಪನಿಸರೀಸ ಗರಿಸರೀಗರಿಸ ನಿಧಪನೀಸಾ

## 4. ಚಕ್ರವಾಕ

ಆ. ಸ ರಿ ಗ ಮ ಪ ದ ನಿ ಸ

ಅ. ಸ ನಿ ದ ಪ ಮ ಗ ರಿ ಸ

72 ಸಂಪೂರ್ಣ ಮೇಳ ಪದ್ಧತಿಯಲ್ಲಿ 16ನೆಯ ರಾಗ. 3ನೇ ಅಗ್ನಿಚಕ್ರದಲ್ಲಿ ನಾಲ್ಕನೆಯ ರಾಗ. ಈ ರಾಗಕ್ಕೆ ಕ್ರಮಭೂತ ಸಂಖ್ಯೆಯು 'ಅಗ-ಭೂ'. ಕಟಪಯಾದಿ ಸೂತ್ರಕ್ಕೆ ಅನುಗುಣವಾಗುವಂತೆ ರಾಗದ ಹೆಸರನ್ನು ಚಕರವಾಕ ಎಂದು ಉಚ್ಚರಿಸಬೇಕಾಗುತ್ತದೆ. ಷಡ್ಜ, ಶುದ್ಧರಿಷಭ, ಅಂತರ ಗಾಂಧಾರ, ಶುದ್ಧಮಧ್ಯಮ, ಪಂಚಮ, ಚತುಶ್ರುತಿ ದೈವತ, ಕೈಶಿಕಿ ನಿಷಾದ ಇವು ಈ ರಾಗದ ಸ್ವರಗಳು. ಸಂಪೂರ್ಣ ರಾಗ. ರಿಷಭ ಮತ್ತು ನಿಷಾದಗಳು ಜೀವಸ್ವರಗಳು. ತ್ರಿಸ್ಥಾಯಿರಾಗ. ಸರ್ವಸ್ವರ ಗಮಕ ವರೀಕ ರಕ್ತಿರಾಗ. ವೈದ್ಯನಾಥ ಅಯ್ಯರ್ ಅವರು ತಮ್ಮ ಹನ್ನೆರಡನೆಯ ವಯಸ್ಸಿನಲ್ಲಿಯೇ ಈ ರಾಗವನ್ನು ಸಂಗೀತ ವಿದ್ವಾಂಸರ ಸಮ್ಮುಖದಲ್ಲಿ ಅಮೋಘವಾಗಿ ಹಾಡಿ 'ಮಹಾ' ಎಂಬ ಬಿರುದನ್ನು ಪಡೆದರೆಂಬ ಪ್ರತೀತಿ ಇದೆ.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ನೀವೇ ಪಾಲಿಂಚರಾ | ರೂಪಕ | ಮೈಸೂರು ಕರಿಗಿರಿರಾಯರು |
| | | ಸುಗುಣಮುಲೇ | ರೂಪಕ | ತ್ಯಾಗರಾಜರು |
| | | ಎಟುಲ ಬ್ರೋತುವೋ | ಛಾಪು | ,, |
| | | ಇಂಕಾ ದಯ | ರೂಪಕ | ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ |

ಸಂಚಾರ : ಗಮಪಮಗರಿ ಪಮನೀದಪ ಮಗಮಪದನಿಸಾ ಸನಿಗರಿಸನಿದ ಪದನಿಸರೀ ನಿಸಾದನೀದಪಮ
ಗಮಪದನಿದಪಾ ದನಿಸರಿಗರಿಸ ನಿದಪಾ ಪಮಗಮಗರೀ ಸನಿಧನಿಸಾ

## 5. ತೋಡಿ

ಆ. ಸ ರಿ ಗ ಮ ಪ ದ ನಿ ಸ

ಅ. ಸ ನಿ ದ ಪ ಮ ಗ ರಿ ಸ

ಇದು 8ನೆಯ ಮೇಳಕರ್ತ ರಾಗ. 2ನೆಯ ಚಕ್ರದಲ್ಲಿ 2ನೆಯ ರಾಗ. ಮೇಳಕರ್ತ ಕ್ರಮಸಂಖ್ಯೆಯಲ್ಲಿ ಈ ರಾಗದ ಭೂತ ಸಂಖ್ಯೆ 'ನೇತ್ರಶ್ರೀ'. ಕಟಪಯಾದಿ ಸೂತ್ರಕ್ಕಾಗಿ ಹನುಮತೋಡಿ ಎಂದು ಕರೆದಿದ್ದಾರೆ. ರಾಗಾಂಗ ರಾಗ. ರಕ್ತಿರಾಗಗಳಲ್ಲಿ ಉತ್ತಮವಾದದ್ದು. ಷಡ್ಜ, ಶುದ್ಧರಿಷಭ, ಸಾಧಾರಣ ಗಾಂಧಾರ, ಶುದ್ಧಮಧ್ಯಮ, ಪಂಚಮ, ಶುದ್ಧದೈವತ, ಕೈಶಿಕಿ ನಿಷಾದ ಇವು ಈ ರಾಗದ ಸ್ವರಗಳು. ಮಧ್ಯಮ, ದೈವತಗಳು ರಾಗಛಾಯಾ ಸ್ವರಗಳು. ಸರ್ವಸ್ವರ ಗಮಕ ವರೀಕ ರಕ್ತಿರಾಗ. ತ್ರಿಸ್ಥಾಯಿ ರಾಗ. ಜಂಟಿ ಮತ್ತು ದಾಟುಸ್ವರ ಪ್ರಯೋಗಗಳು ಅತ್ಯಂತ ರಂಜನೀಯವಾಗಿರುತ್ತವೆ.

| | | | | |
|---|---|---|---|---|
| ಕೆಲವು ರಚನೆಗಳು : | ಸ್ವರಜತಿ | ರಾವೇ ಹಿಮಗಿರಿ | ಆದಿ | ಶ್ಯಾಮಾಶಾಸ್ತ್ರಿ |
| | ವರ್ಣ | ಏರಾ ನಾಪೈ | ಆದಿ | ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ |
| | | ಕನಕಾಂಗಿ | ಅಟ್ಟ | ಪಲ್ಲವಿ ಗೋಪಾಲಯ್ಯ |
| | ಕೃತಿ | ಎಂದುದಾಗಿನಾಡೋ | ಛಾಪು | ತ್ಯಾಗರಾಜರು |
| | | ದಾಶರಥೇ | ಆದಿ | ,, |
| | | ನಿನ್ನೇ ನಮ್ಮಿನಾನು | ಛಾಪು | ಶ್ಯಾಮಾಶಾಸ್ತ್ರಿ |
| | | ಅಂಬ ನಾದು | ಆದಿ | ಪಲ್ಲವಿ ಗೋಪಾಲಯ್ಯ |

ಸಂಚಾರ : ಸನಿಗಾರಿಸಾ ರಿಸಧನೀಧ ಗಾಗರಿರೀ ಗಮದಮಗರಿರೀ ನಿರಿಮಗರಿಸಾ ಮಾ,ಗಗರಿಸ
ರಿಗಮಾ ಗಪಮಗರಿಗಮಾ ದನಿಸನಿಸದಾ ನಿದಪಮಗಾ ದಪಗಾರಿಸ ಸಾನಿದಮದನಿಸಾ
ಸನಿಗಾಗರಿರೀ ನಿರಿಮಗಾರಿಸಾ ಸಾರಿಗಸಾ ರಿಸನಿದಪಮ ಗಮದಪಮದನಿನಿ ದನಿಗರಿನಿದ
ಮದನಿರೀನಿದಮ ಗದಮಗಾ ಗರಿರೀ ಮಗಾರಿಸಾ ರಿಸನಿಧನೀಧ ಗರಿಸರಿನಿಸಾ.

## 6. ಪೂರ್ವಿಕಲ್ಯಾಣಿ

ಆ. ಸ ರಿ ಗ ಮ ಪ ದ ಪ ಸ

ಅ. ಸ ನಿ ದ ಪ ಮ ಗ ರಿ ಸ

ಇದು 53ನೇ ಮೇಳ ಗಮನಶ್ರಮ ರಾಗದಲ್ಲಿ ಜನ್ಯ. ಷಡ್ಜ, ಶುದ್ಧರಿಷಭ, ಅಂತರಗಾಂಧಾರ, ಪ್ರತಿಮಧ್ಯಮ, ಪಂಚಮ, ಚತುಶ್ರುತಿ ದೈವತ, ಕಾಕಲಿ ನಿಷಾದ ಇವು ಈ ರಾಗದ ಸ್ವರಗಳು. ಉಪಾಂಗ ರಾಗ. ವಕ್ರಷಾಡವ–ಸಂಪೂರ್ಣ. ಗಮಕ ವರೀಕ ರಕ್ತಿರಾಗ. ಸಾಯಂಕಾಲ ಸಮಯದಲ್ಲಿ ಹಾಡಲು ತುಂಬ ರಂಜನೀಯವಾಗಿರುತ್ತದೆ.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ಪರಿಪೂರ್ಣಕಾಮ | ರೂಪಕ | ತ್ಯಾಗಯ್ಯ |
| | | ಪರಲೋಕ ಸಾಧನಮೇ | ಆದಿ | ,, |
| | | ಮೀನಾಕ್ಷಿ | ಆದಿ | ದೀಕ್ಷಿತರು |
| | | ನಿನುವಿನಾ | ಮಿಶ್ರಛಾಪು | ಶ್ಯಾಮಾಶಾಸ್ತ್ರಿ |
| | | ಪರಮಪಾವನ ರಾಮ | ಆದಿ | ರಾಮನಾಡ್ ಶ್ರೀನಿವಾಸಯ್ಯಂಗಾರ್ |
| | | ಗಂಗಾಧರ | ರೂಪಕ | ಮೈಸೂರು ಸದಾಶಿವರಾಯರು |

ಸಂಚಾರ : ಸಾರಿಸನಿಧಾ ಸನಿಸಧಾಪಸಾ ಸಾ,ರಿಗಾ ಗಮದಪಮಗರಿ ಮಾಗರಿಸಾ ಪಾಮಗರಿಗಮಪಾ ಪಮನಿದಪಮ ಪದಾಪಸಾ ದನಿದಪಮಗರಿ ಗಮದನಿಮದಸಾ ರಿಸರಿದಾ ಸಾ,ರಿಗಾಗಾ ಗರಿರಿಗರಿರಿಗಾ ಗಮಪಗಮ ರಿಗಮಾಗರಿಸಾ ರಿಸರಿದಸಾ ಸನಿಪದಾಪ ಸಾ ಸನಿದಪಮಗರಿ ಗಮದನಿಮದ ಸರಿಗರಿಸನಿದಪಮ ಗಮನಿದಪಮ ಗಮಪಗಮಾಗಾ ಗರಿಮಗಾರಿ ಸಾಧಸರಿಗರಿಸನಿಧಾ ಸನಿಗರಿಸಸಾ.

## 7. ಬಿಲಹರಿ

ಆ. ಸ ರಿ ಗ ಪ ದ ಸ

ಅ. ಸ ನಿ ದ ಪ ಮ ಗ ರಿ ಸ

ಇದು 29ನೇ ಮೇಳ ಧೀರಶಂಕರಾಭರಣದಲ್ಲಿ ಜನ್ಯ. ಷಡ್ಜ, ಚತುಶ್ರುತಿ ರಿಷಭ, ಅಂತರಗಾಂಧಾರ, ಶುದ್ಧಮಧ್ಯಮ, ಪಂಚಮ, ಚತುಶ್ರುತಿ ದೈವತ, ಕಾಕಲಿ ಮತ್ತು ಕೈಶಿಕಿ ನಿಷಾದ ಇವು ಈ ರಾಗದ ಸ್ವರಗಳು. ಭಾಷಾಂಗರಾಗ. ಕೈಶಿಕಿ ನಿಷಾದವು ಅನ್ಯಸ್ವರ. ರಿ ದ ನಿ ಗಳು ರಾಗಛಾಯಾ ಸ್ವರಗಳು. ಜಂಟಿ ಮತ್ತು ದಾಟುಸ್ವರಗಳು ರಂಜನೀಯ. ಗಮಕ ವರೀಕ ರಕ್ತಿರಾಗ. ಪ್ರಾತಃಕಾಲದ ಹಾಡಿಕೆಗೆ ತುಂಬ ಮನೋಹರವಾಗಿರುತ್ತದೆ. ಉತ್ಸಾಹವನ್ನು ತುಂಬುವ ರಾಗ. ಪದನಿದಪ, ಪದನಿಪ, ಪನಿದಪ ಎಂಬ ಪ್ರಯೋಗಗಳಲ್ಲಿ ಕೈಶಿಕಿ ನಿಷಾದವು ಬರುತ್ತದೆ.

| | | | | |
|---|---|---|---|---|
| ಕೆಲವು ರಚನೆಗಳು : | ಜತಿಸ್ವರ | ಸಾರಿಗಾಪಾ | ಆದಿ | |
| | ವರ್ಣ | ಇಂತ ಚೌಕ | ಆದಿ | ವೀಣಾ ಕುಪ್ಪಯ್ಯರ್ |
| | ಕೃತಿ | ನಾ ಜೀವಾಧಾರ | ಆದಿ | ತ್ಯಾಗಯ್ಯ |
| | | ದೊರಕುನಾ | ಆದಿ | ,, |
| | | ಇಂತಕನ್ನಾನಂದಮೇಮಿ | ರೂಪಕ | ,, |
| | | ನರಸಿಂಹ | ಛಾಪು | ,, |
| | | ಕಾಮಾಕ್ಷಿ | ಆದಿ | ದೀಕ್ಷಿತರು |
| | | ಪರಿದಾನಮಿಚ್ಚಿತೆ | ಝಂಪೆ | ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ |

| | | | |
|---|---|---|---|
| | ಸಾರಸದಳ | ರೂಪಕ | ತಿರುವೊಟ್ರಿಯೂರ್ ತ್ಯಾಗಯ್ಯರ್ |
| ತರಂಗ | ಪೂರಯ ಮಮ | ಆದಿ | ನಾರಾಯಣತೀರ್ಥ |
| ಜಾವಳಿ | ಪಾರಿಪೋವಲೆರಾ | ರೂಪಕ | ಪಟ್ಟಾಭಿರಾಮಯ್ಯ |

ಸಂಚಾರ : ಸರಿಪಮಗರಿಸಾ ರಿಗಸರಿಸನಿಧ ಧಗರಿಸನಿಧಾ ಸರಿಗಪಾ ರಿಗದಪಮಗರಿಸಾ ರಿಗಪದಸಾ ನಿಸದನಿಪಾ ದಸರಿಗಾ ಮಗರಿಗಸರಿಸನಿದ ಪಾದನಿಪದಪಾ ಮಗರಿಗ ದಪಮಗರಿಸಾ ಸನಿನಿದ ಪಧಗರಿಸಾ

## 8. ಮಧ್ಯಮಾವತಿ

ಆ. ಸ ರಿ ಮ ಪ ನಿ ಸ

ಅ. ಸ ನಿ ಪ ಮ ರಿ ಸ

ಇದು 22ನೇ ಮೇಳ ಖರಹರಪ್ರಿಯದಲ್ಲಿ ಜನ್ಯ. ಷಡ್ಜ, ಚತುಶ್ರುತಿ ರಿಷಭ, ಶುದ್ಧಮಧ್ಯಮ, ಪಂಚಮ, ಕೈಶಿಕಿ ನಿಷಾದ ಇವು ಈ ರಾಗದ ಸ್ವರಗಳು. ಔಡವ–ಔಡವ ರಾಗ. ಉಪಾಂಗ ರಾಗ. ಗಾಂಧಾರ ಮತ್ತು ಧೈವತ ವರ್ಜ್ಯ. ಕೆಲವು ಗ್ರಂಥಗಳಲ್ಲಿ ಇದನ್ನು ಮಧ್ಯಮಾದಿ ಎಂದು ಕರೆದಿದೆ. ಮಂಗಳಕರವಾದ ರಾಗ. ಶಾಂತರಸ ಪ್ರಧಾನ.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ವಿನಾಯಕುನಿ | ಆದಿ | ತ್ಯಾಗರಾಜರು |
| | | ಧರ್ಮಸಂವರ್ಧನಿ | ರೂಪಕ | ದೀಕ್ಷಿತರು |
| | | ಪಾಲಿಂಚು ಕಾಮಾಕ್ಷಿ | ಆದಿ | ಶ್ಯಾಮಾಶಾಸ್ತ್ರಿ |
| | | ವೆಂಕಟೇಶ ನಿನ್ನು | ಆದಿ | ತ್ಯಾಗರಾಜರು |
| | | ರಾಮಾಭಿರಾಮ | ಆದಿ | ಮೈಸೂರು ವಾಸುದೇವಾಚಾರ್ಯ |

ಸಂಚಾರ : ರಿಮರಿರಿಸನಿ ಸರಿಸಸನಿಸ ನೀಸಾಪ ನಿಸಸರಿಪಮ ರಿಮರಿಮಪಾ ಪನಿಮಾಪನಿಸಾ ಮಾಪಾನೀನಿಸಾ ಸರೀಮರೀ ಪಮನಿಪಸನಿರಿಸ ಮರಿಸನಿಪಾ ರಿಮರಿಸರೀ ರಿಸನಿಪಮಾ ರಿಮರಿರಿಸಾ ಸನಿರಿಸನಿಪಾ ಸನಿನಿಸನಿನಿಸಾ.

## 9. ಮಾಯಾಮಾಳವಗೌಳ

ಆ. ಸ ರಿ ಗ ಮ ಪ ದ ನಿ ಸ

ಅ. ಸ ನಿ ದ ಪ ಮ ಗ ರಿ ಸ

ಇದು 15ನೇ ಮೇಳಕರ್ತ ರಾಗ. ಮೂರನೆಯ ಅಗ್ನಿಚಕ್ರದಲ್ಲಿ ಮೂರನೆಯದಾದ 'ಗೋ' ರಾಗ. ಕಟಪಯಾದಿ ಸೂತ್ರವು ವ್ಯವಸ್ಥೆಗೊಳ್ಳುವುದಕ್ಕೆ ಮುಂಚೆ ಇದನ್ನು ಮಾಳವಗೌಳ ಎಂದು ಕರೆಯುತ್ತಿದ್ದರು. ಅನಂತರ ಆ ಸೂತ್ರಕ್ಕೆ ಅನುಗುಣವಾಗುವಂತೆ ಮಾಯಾ ಎಂಬುದನ್ನು ಸೇರಿಸಲಾಯಿತು. ಮೂರ್ಛನಾಕಾರಕ ಮೇಳ. ಈ ರಾಗದ ರಿಷಭ ಮತ್ತು ಮಧ್ಯಮ ಮೂರ್ಛನೆಗಳು ರಸಿಕಪ್ರಿಯ ಹಾಗೂ ಸಿಂಹೇಂದ್ರಮಧ್ಯಮ ರಾಗಗಳನ್ನು ಉತ್ಪತ್ತಿ ಮಾಡುತ್ತವೆ. ಷಡ್ಜ, ಶುದ್ಧರಿಷಭ, ಅಂತರ ಗಾಂಧಾರ, ಶುದ್ಧಮಧ್ಯಮ, ಪಂಚಮ, ಶುದ್ಧಧೈವತ, ಕಾಕಲಿ ನಿಷಾದ ಇವು ಈ ರಾಗದ ಸ್ವರಗಳು. ಸಂಪೂರ್ಣ. ಸರ್ವಸ್ವರ ಗಮಕ ವರೀಕ ರಕ್ತಿರಾಗ. ಸಾರ್ವಕಾಲಿಕ ರಾಗ. ತ್ರಿಸ್ಥಾಯಿ ರಾಗ. ಉತ್ತರಾದಿ ಸಂಗೀತದ ಭೈರವ್ ಇದನ್ನು ಹೋಲುತ್ತದೆ.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ವಿದುಲಕು ಮ್ರೊಕ್ಕೆದ | ಆದಿ | ತ್ಯಾಗರಾಜರು |
| | | ಮೇರುಸಮಾನ | ಆದಿ | ,, |
| | | ಶ್ರೀನಾಥಾದಿ ಗುರುಗುಹೋ | ಆದಿ | ದೀಕ್ಷಿತರು |

| | | |
|---|---|---|
| ಕಲಿನರಲುಕು | ಆದಿ | ಮೈಸೂರು ವಾಸುದೇವಾಚಾರ್ಯ |
| ಮಾಯಾತೀತ ಸ್ವರೂಪಿಣಿ | ರೂಪಕ | ಪೊನ್ನಯ್ಯಪಿಳ್ಳೈ |

ಸಂಚಾರ: ಸರಿಗಮಾ ಗಮದಪಮ ಗಮಪನಿಸರಿಸ ಸನಿದಪದನಿಸಾ ರಿಗರಿಗಾಮಗರಿಸ ಸನಿದಪಮಗ ಗಮಪದನಿಸರಿಸನಿದಪಮಗರಿಸಾ ಸನಿಧನಿಸರಿಸಾ

## 10. ಖರಹರಪ್ರಿಯ

ಆ. ಸ ರಿ ಗ ಮ ಪ ದ ನಿ ಸ

ಅ. ಸ ನಿ ದ ಪ ಮ ಗ ರಿ ಸ

ಇದು 22ನೇ ಮೇಳಕರ್ತ ರಾಗ. 4ನೆಯ ವೇದಚಕ್ರದಲ್ಲಿ 4ನೆಯದಾದ 'ಭೂ' ರಾಗ. ಷಡ್ಜ, ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಶುದ್ಧಮಧ್ಯಮ, ಪಂಚಮ, ಚತುಃಶ್ರುತಿ ದೈವತ, ಕೈಶಿಕಿ ನಿಷಾದ ಇವು ಈ ರಾಗದ ಸ್ವರಗಳು. ಸರ್ವಸ್ವರ ಗಮಕ ವರಿಕ ರಕ್ತಿರಾಗ. ತ್ರಿಸ್ಥಾಯಿ. ಈ ರಾಗದಲ್ಲೇ ಜನಿಸಿದ ಶ್ರೀರಾಗವು ಅಸಂಪೂರ್ಣ ಮೇಳ ಪದ್ಧತಿಯ ಪ್ರಕಾರ 22ನೆಯದು. ಮೂರ್ಛನಾಕಾರಕ ಮೇಳ. ಹಿಂದುಸ್ಥಾನಿ ಸಂಗೀತದ ಕಾಪಿ ರಾಗವು ಇದನ್ನು ಹೋಲುತ್ತದೆ.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ರಾಮ ನೀ ಸಮಾನಮೆವರು | ರೂಪಕ | ತ್ಯಾಗರಾಜರು |
| | | ಪಕ್ಕಲ ನಿಲಬಡಿ | ಮಿಶ್ರಛಾಪು | ,, |
| | | ನಡಚಿ ನಡಚಿ | ಆದಿ | ,, |
| | | ಸತತಂ ತಾವಕ | ಆದಿ | ಸ್ವಾತಿ ತಿರುನಾಳ್ |

ಸಂಚಾರ: ಸಸರಿಗಾ ಗರಿಸರೀ ಗರಿಸನಿಧಾ ನೀಗರಿಸಾ ನಿಸರಿಗಮಾ ಮಗಪಮಗರಿಗಸ ಗರಿಸನೀಧನಿರೀ ರಿಗಮಮಪಾ ನೀದಾ ನಿದಪಮಗರಿ ಗಮಪದನಿದನೀ ದನಿಗರಿಸಾ ಗರಿನಿದನೀ ಸಾರಿಸನಿದಾ ನಿದಪದನಿದಪಮಗರೀ ಮಗರಿಗ ನಿದಪದ ನೀಗರಿಸಾ ದನಿರಿಸನಿಸ ದನಿಪದನಿದಪಮಗಾ ಗಮರೀ ರಿಗಸಾ ಗರಿನೀಧಾ ನೀಗರಿಸಾ.

## 11. ಮೋಹನ

ಆ. ಸ ರಿ ಗ ಪ ದ ಸ

ಅ. ಸ ದ ಪ ಗ ರಿ ಸ

ಇದು 28ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ. ಷಡ್ಜ, ಚತುಶ್ರುತಿ ರಿಷಭ, ಅಂತರ ಗಾಂಧಾರ, ಪಂಚಮ, ಚತುಶ್ರುತಿ ದೈವತ ಇವು ಈ ರಾಗದ ಸ್ವರಗಳು. ಔಡವ–ಔಡವ ಉಪಾಂಗ ರಾಗ. ನಿ ಮತ್ತು ಮ ವರ್ಜ್ಯ. ಸರ್ವಸ್ವರ ಗಮಕ ವರಿಕ ರಕ್ತಿರಾಗ. ಹಿಂದೂಸ್ಥಾನಿಯ ಭೂಪ್ ರಾಗವು ಇದನ್ನು ಹೋಲುತ್ತದೆ. ರಿ, ಗ, ದ ರಾಗಛಾಯಾ ಸ್ವರಗಳು.

| | | | | |
|---|---|---|---|---|
| ಕೆಲವು ರಚನೆಗಳು : | ಗೀತೆ | ವರವೀಣಾ | | |
| | ವರ್ಣ | ನಿನ್ನುಕೋರಿ | ಆದಿ | ರಾಮನಾಡ್ ಶ್ರೀನಿವಾಸಯ್ಯಂಗಾರ್ |
| | ಕೃತಿ | ಭವನುತ | ಆದಿ | ತ್ಯಾಗಯ್ಯ |
| | | ನನ್ನುಪಾಲಿಂಪ | ಆದಿ | ,, |
| | | ಮೋಹನರಾಮ | ಆದಿ | ,, |
| | | ಏನ್ ಪಳ್ಳಿಕೊಂಡಿರಯ್ಯ | ಆದಿ | ಅರುಣಾಚಲಕವಿ |
| | | ಕಂಡುಕಂಡು ನೀ ಎನ್ನ | ಝಂಪಛಾಪು | ಪುರಂದರದಾಸರು |
| | | ಮೋಹಮೆಲ್ಲ | ರೂಪಕ | ಪಟ್ಟಾಭಿರಾಮಯ್ಯ |

ಸಂಚಾರ : ಗಾಗರಿ ಸರಿಗರಿ ಗಪದರಿಸದಪಗ ದಪಗರಿಸರಿಗಾರಿಸರೀ ಧಸಾಧಧಸಸರೀ ಪಗರಿಸಾರಿ ಪದಸದಪಗ ಸಾದಪಗಪದಸಾದಾ ಸರಿಗಾರಿಗರಿರಿಗಾ ದದಪಗರಿಗದಪದಾ ದಪಾಗರಿಪಗರಿಸರೀ ರಿಗಸರಿ ಧಧಧಸರಿಗಾ ರಿಗಸರೀಸಾ.

## 12. ಶ್ರೀರಂಜನಿ

ಆ. ಸ ರಿ ಗ ಮ ದ ನಿ ಸ
ಅ. ಸ ನಿ ದ ಮ ಗ ರಿ ಸ

ಇದು 22ನೇ ಮೇಳ ಖರಹರಪ್ರಿಯದಲ್ಲಿ ಜನ್ಯ. ಷಡ್ಜ, ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಚತುಶ್ರುತಿ ದೈವತ, ಕೈಶಿಕಿ ನಿಷಾದ ಇವು ಈ ರಾಗದ ಸ್ವರಗಳು. ಪಂಚಮ ವರ್ಜ್ಯ. ಷಾಡವ-ಷಾಡವ. ರಿ ಗ ದ ನಿ ರಾಗ ಛಾಯಾ ಸ್ವರಗಳು.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ಮಾರುಬಲ್ಕ | ಆದಿ | ತ್ಯಾಗರಾಜರು |
| | | ಭುವಿನಿ ದಾಸುಡನೇ | ಆದಿ | ,, |
| | | ಬ್ರೋಚೇವಾರೆವರೆ | ಆದಿ | ,, |
| | | ಸರಿಯೆವ್ವರೆ | ಆದಿ | ,, |
| | | ಸೊಗಸುಗಾ | ರೂಪಕ | ,, |

ಸಂಚಾರ : ರೀಗಮಗರಿಸಾ ಧನಿಸರಿಗಮರಿಗಾರಿ ಗಮದನಿದಾಮದನಿಸಾ ನಿಸರಿಗಮಗರಿಸಾ ಸನಿಗರಿಸನಿದಮಾ ಮದನಿದಮಗಾರಿ ರೀಗರಿಸನಿಧನಿಸಾ.

## 13. ಶುದ್ಧ ಸಾವೇರಿ

ಆ. ಸ ರಿ ಮ ಪ ದ ಸ
ಅ. ಸ ದ ಪ ಮ ರಿ ಸ

ಇದು 29ನೇ ಮೇಳ ಧೀರಶಂಕರಾಭರಣದಲ್ಲಿ ಜನ್ಯ. ಷಡ್ಜ, ಚತುಶ್ರುತಿ ರಿಷಭ, ಶುದ್ಧ ಮಧ್ಯಮ, ಪಂಚಮ, ಚತುಶ್ರುತಿ ದೈವತ ಇವು ಈ ರಾಗದ ಸ್ವರಗಳು. ಗಾಂಧಾರ ಮತ್ತು ನಿಷಾದ ವರ್ಜ್ಯ. ತ್ರಿಸ್ಥಾಯಿ. ಮೂರ್ಛನಾಕಾರಕ ರಾಗ. ರಿ ದ ರಾಗಛಾಯಾ ಸ್ವರಗಳು. ಜಂಟಿ ಮತ್ತು ದಾಟುಸ್ವರ ಪ್ರಯೋಗಗಳು ರಂಜನೀಯವಾಗಿರುತ್ತವೆ. ಉತ್ತರಾದಿಯ ದುರ್ಗಾ ಎಂಬುದನ್ನು ಹೋಲುತ್ತದೆ. ದೀಕ್ಷಿತರು ಅನುಸರಿಸಿದ ಸಂಪ್ರದಾಯದಲ್ಲಿ ದೇವಕ್ರಿಯಾ ಎಂಬ ರಾಗವು ಈ ರಾಗವನ್ನು ಹೋಲುತ್ತದೆ. ಉಪಾಂಗ ರಾಗ.

| | | | | |
|---|---|---|---|---|
| ಕೆಲವು ರಚನೆಗಳು : | ಗೀತೆ | ಅನಲೇಕರ | ತ್ರಿಪುಟ | |
| | ಕೃತಿ | ಕಾಲಹರಣ | ರೂಪಕ | ತ್ಯಾಗರಾಜರು |
| | | ದಾರಿನಿ ತೆಲುಸು | ಆದಿ | ,, |
| | | ಸಾಮಜವರದಾ | ರೂಪಕ | ರಾಮನಾಥ್ ಶ್ರೀನಿವಾಸಯ್ಯಂಗಾರ್ |

ಸಂಚಾರ : ಸರಿಮಪದಾ ಮಪದಸಾ ಸರಿಮರಿಸರೀ ದಸಸರಿಮಮರಿರಿಸಾ ದಪಮಪದರಿಸದಾಪ ಮದಪಮರೀ ರಿಮಪಮರಿಸಧಸಾ ಧರಿಸಧಸಾ.

14. ಕಾಮವರ್ಧಿನಿ

ಆ. ಸ ರಿ ಗ ಮ ಪ ದ ನಿ ಸ
ಅ. ಸ ನಿ ದ ಪ ಮ ಗ ರಿ ಸ

ಇದು 51ನೆಯ ಮೇಳಕರ್ತ ರಾಗ. ಷಡ್ಜ, ಶುದ್ಧರಿಷಭ, ಅಂತರಗಾಂಧಾರ, ಪ್ರತಿಮಧ್ಯಮ, ಪಂಚಮ, ಶುದ್ಧಧೈವತ, ಕಾಕಲಿ ನಿಷಾದ ಇವು ಈ ರಾಗದ ಸ್ವರಗಳು. ಮ ಪ ದ ರಾಗಛಾಯಾ ಸ್ವರಗಳು. ಸರ್ವಸ್ವರ ಗಮಕ ವರೀಕ ರಕ್ತಿರಾಗ. ಈ ಮೇಳಕರ್ತದ ಭೂತಸಂಖ್ಯೆ 'ಬ್ರಹ್ಮ-ಗೋ'. ಮೊದಲಿಗೆ ಈ ರಾಗದ ಹೆಸರನ್ನು ಗೋವಿಂದಾಚಾರ್ಯರ ಸಂಗ್ರಹ ಚೂಡಾಮಣಿಯಲ್ಲಿ ಕಾಣುತ್ತೇವೆ. ದೀಕ್ಷಿತರು ಕಾಶಿರಾಮಕ್ರಿಯ ಎಂದೂ, ತ್ಯಾಗರಾಜರು ಪಂತುವರಾಳಿ ಎಂದೂ ಕರೆಯುವ ಈ ರಾಗವನ್ನೇ ಈಗ ಕಾಮವರ್ಧಿನಿ ಎಂದು ಕರೆಯಲಾಗುತ್ತಿದೆ.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ಅಪ್ಪರಾಮಭಕ್ತಿ | ರೂಪಕ | ತ್ಯಾಗರಾಜರು |
| | | ನಿನ್ನು ನೆರನಮ್ಮಿನಾನುರಾ | ರೂಪಕ | ,, |
| | | ಸುಂದರತರ ದೇಹಂ | ಆದಿ | ,, |
| | | ರಾಮನಾಥಂ | ತ್ರಿ. ಏಕ | ದೀಕ್ಷಿತರು |
| | | ಸಾರಸಾಕ್ಷ | ಆದಿ | ಸ್ವಾತಿ ತಿರುನಾಳ್ |
| | | ಸರೋರುಹಾಸನ | ಆದಿ | ,, |
| | | ಮರಳಿಮರಳಿ ಜಯಮಂಗಳಂ | ಆದಿ | ತಾಳ್ಲಪಾಕಂ ಅಣ್ಣಮಯ್ಯ |

ಸಂಚಾರ : ಗಮಪದಾ ಪನಿದಪಮ ದದಪಮಗಾ ಗದಪಾಮಗಮಪ ದನಿಸಾದನಿಸಾ ಗಗಮಮದದನಿನಿ ರಿರಿಸಾ ರಿನಿದಪಾ ಗಮಪಗಮರೀ ಗಮಪದನಿಸಾ ಗರಿರಿಗಾ ಗರಿಮಗರಿಸಾ ಗರಿಸನಿದಪಮಗಾ ರಿಗಮಾಗರೀ ಗರಿಮಗರಿಸಾ ಸನಿಧಪಾ ಸನಿಗರಿಸನಿ ಧನಿಪಮಾಧಾನಿಸಾ.

15. ಹಂಸಧ್ವನಿ

ಆ. ಸ ರಿ ಗ ಪ ನಿ ಸ
ಅ. ಸ ನಿ ಪ ಗ ರಿ ಸ

ಇದು 29ನೆಯ ಮೇಳ ಧೀರಶಂಕರಾಭರಣದಲ್ಲಿ ಜನ್ಯ. ಷಡ್ಜ, ಚತುಶ್ರುತಿ ರಿಷಭ, ಅಂತರಗಾಂಧಾರ, ಪಂಚಮ, ಕಾಕಲಿ ನಿಷಾದ ಇವು ಈ ರಾಗದ ಸ್ವರಗಳು. ರಾಮಸ್ವಾಮಿ ದೀಕ್ಷಿತರು ಈ ರಾಗವನ್ನು ಪ್ರಯೋಗಕ್ಕೆ ತಂದರೆಂದು ಹೇಳುತ್ತಾರೆ. ಮೂರ್ಛನಾಕಾರಕ ಜನ್ಯರಾಗ. ಇದರ ಪಂಚಮ ಮೂರ್ಛನೆಯು ನಾಗಸ್ವರಾವಳಿ ರಾಗವನ್ನು ಕೊಡುತ್ತದೆ. ಔಡವ-ಔಡವ. ಮ ದ ವರ್ಜ್ಯ. ಗಮಕ ವರೀಕ ರಕ್ತಿರಾಗ. ತ್ರಿಸ್ಥಾಯಿ ರಾಗ. ಗಾಂಧಾರ ನಿಷಾದಗಳು ರಾಗಛಾಯಾ ಸ್ವರಗಳು. ವೀರರಸ ಪ್ರಧಾನ ರಾಗ.

| | | | | |
|---|---|---|---|---|
| ಕೆಲವು ರಚನೆಗಳು : | ವರ್ಣ | ಜಲಜಾಕ್ಷ | ಆದಿ | ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ |
| | | ಪಗವಾರಿ | ಆದಿ | ,, |
| | ಕೃತಿ | ಶ್ರೀ ರಘುಕುಲ | ಆದಿ | ತ್ಯಾಗರಾಜರು |
| | | ವಾತಾಪಿ ಗಣಪತಿಂ | ಆದಿ | ದೀಕ್ಷಿತರು |
| | | ವಂದೇಽನಿಶಮಹಂ | ಆದಿ | ಮೈಸೂರು ವಾಸುದೇವಾಚಾರ್ಯರು |
| | | ಗಜವದನ ಬೇಡುವೆ | ಆದಿ | ಪುರಂದರದಾಸರು |
| | | ಕೊಡುಬೇಗ ದಿವ್ಯಮತಿ | ಆದಿ | ,, |

ಸಂಚಾರ : ಸರಿಗರಿಸನಿರೀ ನಿಗರಿನಿರಿನಿಧಾ ನಿಸರಿಗಧನಿಸರಿಗರೀ ಗನಿಪಗರಿಪಗರಿನಿರೀ ಗಪನಿಸಗರಿನಿರಿನೀ ಪನಿರಿನಿಪಗಾ ಗಪಗರಿಸರೀ ರಿಸಗರಿಸನಿರೀಸಾ.

## 16. ಶಂಕರಾಭರಣ

ಆ. ಸ ರಿ ಗ ಮ ಪ ದ ನಿ ಸ

ಅ. ಸ ನಿ ದ ಪ ಮ ಗ ರಿ ಸ

ಇದು ಸಂಪೂರ್ಣ ಮೇಳಪದ್ಧತಿಯಲ್ಲಿ 29ನೆಯ ಜನಕರಾಗ. ಕಟಪಯಾದಿ ಸೂತ್ರದ ಅನುಕೂಲಕ್ಕಾಗಿ ಧೀರ ಎಂಬುದನ್ನು ಸೇರಿಸಿ ಧೀರಶಂಕರಾಭರಣ ಎಂದು ಕರೆದಿದ್ದಾರೆ. ಮೇಳಕರ್ತ ಕ್ರಮದಲ್ಲಿ 5ನೇ ಚಕ್ರದಲ್ಲಿ 5ನೇ ರಾಗ. ಭೂತಸಂಜ್ಞೆ 'ಬಾಣ-ಮ'. ಮೂರ್ಛನಾಕಾರಕ ಮೇಳ. ಇದರ ರಿ ಗ ಮ ಪ ದ ನಿ ಗಳು ಖರಹರಪ್ರಿಯ, ತೋಡಿ, ಕಲ್ಯಾಣಿ, ಹರಿಕಾಂಭೋಜಿ, ನಠಭೈರವಿ ರಾಗಗಳ ಸ್ವರಗಳನ್ನು ಕೊಡುತ್ತವೆ. ಷಡ್ಜ, ಚತುಶ್ರುತಿ ರಿಷಭ, ಅಂತರಗಾಂಧಾರ, ಶುದ್ಧಮಧ್ಯಮ, ಪಂಚಮ, ಚತುಶ್ರುತಿ ದೈವತ, ಕಾಕಲಿ ನಿಷಾದ ಇವು ಈ ರಾಗದ ಸ್ವರಗಳು. ಸಂಪೂರ್ಣರಾಗ. ಸರ್ವಸ್ವರ ಗಮಕ ವರಿಕ ರಕ್ತಿರಾಗ. ಉತ್ತರಾದಿಯ ಬಿಲಾವಲ್ ಈ ರಾಗವನ್ನು ಹೋಲುತ್ತದೆ.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ಎದುಟ ನಿಲಚಿತೇ | ಆದಿ | ತ್ಯಾಗರಾಜರು |
| | | ಭಕ್ತಿಭಿಕ್ಷಮೀಯವೇ | ರೂಪಕ | ,, |
| | | ದಕ್ಷಿಣಾಮೂರ್ತೇ | ಝಂಪೆ | ದೀಕ್ಷಿತರು |
| | | ಶಂಕರಾಚಾರ್ಯ | ಆದಿ | ಸುಬ್ಬರಾಮ ದೀಕ್ಷಿತರು |
| | | ಸರೋಜದಳನೇತ್ರಿ | ಆದಿ | ಶ್ಯಾಮಾಶಾಸ್ತ್ರಿ |

ಸಂಚಾರ : ಧಾನೀಸಾ ಧನಿಧಾ ಧನಿಸಾ ರಿಗಮಗರೀಸಾ ಗರಿಗಮಾ ಗರಿರೀಮಗರಿಗಾರಿ ರಿನಿಸಧನಿಧಾ ಧನಿಸರಿಗಮಪಾ ನಿಧಸನಿಧರಿರೀ ಪಧನಿಸರಿಗಮಪಾ ಮಗಾರಿಸನಿಧನೀಪ ಸರಿಗಮಪಗರಿಸಾ ದಪಮಗಮಾ ಪದನಿಸದನಿಪಾ ರಿಸಾರಿನೀಸದಾನಿಪಾ ಮಪಸಪಾ ಮದಪಗರೀಸಾ ಧಧನಿನಿ ಸರಿಸನಿಸಾ ಧನಿಧಾ ಧನಿಸರಿಗಮಪಾ ಮಗಗರಿಸಧನೀಸಾ.

## 17. ಹರಿಕಾಂಭೋಜಿ

ಆ. ಸ ರಿ ಗ ಮ ಪ ದ ನಿ ಸ

ಅ. ಸ ನಿ ದ ಪ ಮ ಗ ರಿ ಸ

ಇದು 28 ನೆಯ ಮೇಳಕರ್ತರಾಗ. ಷಡ್ಜ, ಚತುಶ್ರುತಿ ರಿಷಭ, ಅಂತರಗಾಂಧಾರ, ಶುದ್ಧಮಧ್ಯಮ, ಪಂಚಮ, ಚತುಶ್ರುತಿ ದೈವತ, ಕೈಶಿಕಿ ನಿಷಾದ ಇವು ಈ ರಾಗದ ಸ್ವರಗಳು. ಸರ್ವಸ್ವರ ಗಮಕ ವರಿಕ ರಕ್ತಿರಾಗ. ಮೂರ್ಛನಾಕಾರಕ ಜನಕರಾಗ.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ಪನ್ನಗಶಯನ | ಆದಿ | ಮೈಸೂರು ಸದಾಶಿವರಾವ್ |
| | | ಸಾಕೇತನಗರನಾಥ | ರೂಪಕ | ,, |
| | | ಎಂತರಾನಿ | ಆದಿ | ತ್ಯಾಗರಾಜರು |
| | | ಎಂದುಕು ನಿರ್ದಯ | ಆದಿ | ,, |
| | | ದಿನಮಣಿವಂಶ | ಆದಿ | ,, |
| | | ರಾಮ ನನ್ನು ಬ್ರೋವರಾ | ರೂಪಕ | ,, |

ಸಂಚಾರ : ರಿಗಮಪಾಮಗರೀ ಪಮಗರೀಸಾ ನಿಧನಿಸರಿಗಾರಿಸ ಗಮಪದನಿದಪೀ ನಿದಪೀಸಾ ರೀಗಮಗರಿಸಾ ರಿಸರಿಗ ಸಾನಿದಪಾ ಪದನಿದಪೀ ನಿದಪಮಗರಿ ಪಮಗರಿಸ ದನಿಸಧನಿಸಾ.

57. ಸಿಂಹೇಂದ್ರಮಧ್ಯಮ

ಆ. ಸರಿಗಮಪದನಿಸ
ಅ. ಸನಿದಪಮಗರಿಸ

ಇದು 57ನೆಯ ಮೇಳಕರ್ತ ರಾಗ. ಭೂತಸಂಖ್ಯೆ 'ದಿಶಿ–ಗೋ'. ಷಡ್ಜ, ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಪ್ರತಿಮಧ್ಯಮ, ಪಂಚಮ, ಶುದ್ಧಧೈವತ, ಕಾಕಲಿ ನಿಷಾದ ಇವು ಈ ರಾಗದ ಸ್ವರಗಳು. ಸಂಪೂರ್ಣ ರಕ್ತಿರಾಗ. ಸಾರ್ವಕಾಲಿಕ ಮಧ್ಯಮ ರಾಗ. ಪ್ರೌಢ ಆಲಾಪನೆಗೆ ಅವಕಾಶವಿದೆ. ಅಸಂಪೂರ್ಣ ಮೇಳಪದ್ಧತಿಯಲ್ಲಿ ಇದಕ್ಕೆ 'ಸಮುದ್ಯುತಿ' ಎಂಬ ಹೆಸರಿದೆ.

| | | | | |
|---|---|---|---|---|
| ಕೆಲವು ರಚನೆಗಳು : | ಕೃತಿ | ನೀದು ಚರಣಮುಲೇ | ಛಾಪು | ಕೆ. ವಿ. ಶ್ರೀನಿವಾಸಯ್ಯಂಗಾರ್ (ತ್ಯಾಗರಾಜ ಮುದ್ರೆ) |
| | | ನತಜನಪರಿಪಾಲ | ರೂಪಕ | ,, ,, |
| | | ನನ್ನು ಬ್ರೋಚು | ಆದಿ | ವೀಣಾ ಕುಪ್ಪಯ್ಯರ್ |
| | | ನಿನ್ನೇ ನಮ್ಮಿತಿನಯ್ಯ | ಆದಿ | ಮೈಸೂರು ವಾಸುದೇವಾಚಾರ್ಯ |

ಸಂಚಾರ : ದನಿಸನಿದಪಮ ಪದನಿದನಿಸಾ,ಸ ಸದನಿಸರೀ ಸರಿಗರಿಸನಿಸರಿಗರೀ ಸಮಗಗರಿರಿಸಸನಿ ಸಾ,ಸನಿದಪಮ ಪದನಿಸರಿಸನಿದಪಮ ಪಮಪದಪಮ ದಮಗಾ ಪಮಗರೀ ಗರಿಸನಿಧಸಮ ಧಧನಿಧನಿಸಾ.

*  *  *  *  *

ಈ ಸಂಪುಟದಲ್ಲಿ 15 ಮಂದಿ ಸುಪ್ರಸಿದ್ಧ ವಾಗ್ಗೇಯಕಾರರ ಕೃತಿಗಳನ್ನು ಆರಿಸಿ ಕೊಟ್ಟಿದೆ. ಅವರ ಪರಿಚಯವನ್ನು ಸ್ಥೂಲವಾಗಿ ಈ ಕೆಳಗೆ ಮಾಡಿದೆ :

1. **ಮೈಸೂರು ವಾಸುದೇವಾಚಾರ್ಯರು.** 1865–1961. ಬೆಂಗಳೂರಿನ ಬಳಿಯ ಕಾನಕಾನಹಳ್ಳಿಯಲ್ಲಿ ಜನಿಸಿದರು. ಬಾಲ್ಯದಿಂದಲೇ ಮೈಸೂರಿನ ಮಹಾರಾಜಾ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ ವಿದ್ಯಾಭ್ಯಾಸವನ್ನು ಶಾಸ್ತ್ರೀಯ ವಾಗಿ ಮಾಡಿದರು. ಮೊದಲಿಗೆ ವೀಣಾ ಪದ್ಮನಾಭಯ್ಯನವರಲ್ಲಿ ಸಂಗೀತಾಭ್ಯಾಸ ಮಾಡಿ, ಶ್ರೀಮನ್ಮಹಾರಾಜರ ಪ್ರೋತ್ಸಾಹ ದಿಂದ ತಿರುವೈಯಾರಿಗೆ ಹೋದರು. ಅಲ್ಲಿ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಅವರಲ್ಲಿ ಸಂಗೀತದ ಲಕ್ಷ್ಯ ಲಕ್ಷಣಗಳನ್ನು ಸಮಗ್ರವಾಗಿ ಕಲಿತರು. ಆಮೇಲೆ ಮೈಸೂರು ರಾಜಾಸ್ಥಾನದಲ್ಲಿ ಆಸ್ಥಾನ ವಿದ್ವಾಂಸರಾದರು. ಇವರ ವಿದ್ವತ್ತನ್ನು ಮೆಚ್ಚಿ 'ಸಂಗೀತ ಶಾಸ್ತ್ರರತ್ನ' ಎಂಬ ಬಿರುದನ್ನು ಮಹಾರಾಜರು ನೀಡಿದರು.

ವಾಸುದೇವಾಚಾರ್ಯರಿಗೆ ಗೇಯರಚನಾ ಪ್ರತಿಭೆ ಜನ್ಮತಃ ಬಂದ ಸಂಪತ್ತು. 'ವಾಸುದೇವ' ಎಂಬ ಅಂಕಿತದಲ್ಲಿ ಇನ್ನೂರಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ. ಅವುಗಳ ಭಾಷೆ ತೆಲುಗು ಇಲ್ಲವೇ ಸಂಸ್ಕೃತ. 'ವಾಸುದೇವ ಕೀರ್ತನ ಮಂಜರಿ' ಎರಡು ಸಂಪುಟಗಳಲ್ಲಿ ಪ್ರಕಟವಾಗಿದೆ. ಮದರಾಸಿನ ಅಡಿಯಾರಿನ ಕಲಾಕ್ಷೇತ್ರದಲ್ಲಿ ತಮ್ಮ ಜೀವನದ ಕೊನೆಯ ಭಾಗವನ್ನು ಕಳೆದ ವಾಸುದೇವಾಚಾರ್ಯರು ಶ್ರೀಮದ್ ವಾಲ್ಮೀಕಿ ರಾಮಾಯಣದ ಶ್ಲೋಕಗಳಿಗೆ ರಾಗಸಂಯೋಜನೆ ಮಾಡುವ ಮಹತ್ತಾದ ಕಾರ್ಯ ನಿರ್ವಹಿಸಿದರು. ಭಾರತ ಸರಕಾರವು ಅವರಿಗೆ 'ಪದ್ಮಭೂಷಣ' ಪದವಿಯನ್ನು ನೀಡಿ ಪುರಸ್ಕರಿಸಿತು.

ಇವರ ಅತ್ಯಂತ ಪ್ರಸಿದ್ಧವಾದ ರಚನೆಗಳಲ್ಲಿ ಕೆಲವು :

| | |
|---|---|
| ರಾರಾ ರಾಜೀವಲೋಚನ | ಮೋಹನ |
| ಬ್ರೋಚೇವಾರೆವರುರಾ | ಕಮಾಚ್ |
| ಶ್ರೀ ಚಾಮುಂಡೇಶ್ವರಿ ಪಾಲಯಮಾಂ | ಬಿಲಹರಿ |

ಈ ಸಂಪುಟದಲ್ಲಿ ಅವರ 'ರಾರಾ ರಾಜೀವಲೋಚನ' ಮತ್ತು ಸಿಂಹೇಂದ್ರಮಧ್ಯಮ ರಾಗದ 'ನಿನ್ನೇ ನಮ್ಮಿತಿನಯ್ಯ' ಕೃತಿಗಳನ್ನು ಅರಿಸಿಕೊಂಡಿದೆ.

2. **ತಂಜಾವೂರು ಪೊನ್ನಯ್ಯಪಿಳ್ಳೆ.** 1804ರಲ್ಲಿ ತಂಜಾವೂರಿನಲ್ಲಿ ಜನಿಸಿದರು. ತಂಜಾವೂರಿನ ಸುಪ್ರಸಿದ್ಧ ಭರತನಾಟ್ಯ ಪ್ರವೀಣ ಸೋದರರಾದ ಚಿನ್ನಯ್ಯ, ಪೊನ್ನಯ್ಯ, ಶಿವಾನಂದಂ, ವಡಿವೇಲು ಇವರಲ್ಲಿ ಎರಡನೆಯವರು. ಇವರ ಸಂಗೀತಾಭ್ಯಾಸವು ಮೊದಲಿಗೆ ಮುತ್ತುಸ್ವಾಮಿ ದೀಕ್ಷಿತರಲ್ಲಿ ನಡೆಯಿತು. ಅಭಿನಯಕ್ಕೆ ತಗುವ ಹಲವು ಪ್ರಾಕಾರಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಶಬ್ದ, ಪದವರ್ಣ, ಜಾವಳಿ ಮೊದಲಾದ ಬಗೆಯ ಕೃತಿಗಳನ್ನು ರಚಿಸಿದ್ದಾರೆ.

ಮಾಯಾಮಾಳವಗೌಳ ರಾಗದ 'ಮಾಯಾತೀತ ಸ್ವರೂಪಿಣಿ' ಇವರ ಪ್ರಸಿದ್ಧ ರಚನೆಗಳಲ್ಲಿ ಒಂದು.

3. **ಪಟ್ಣಂ ಸುಬ್ರಹ್ಮಣ್ಯ ಅಯ್ಯರ್.** 1845–1902. ಇವರ ತಂದೆ ಭಾರತಂ ವೈದ್ಯನಾಥಯ್ಯರ್. ಸಂಗೀತ ಮತ್ತು ಸಂಸ್ಕೃತ ಎರಡರಲ್ಲೂ ಅಪ್ರತಿಮ ಪಾಂಡಿತ್ಯಕ್ಕೆ ಹೆಸರಾದ ಮನೆತನ ಅವರದು. ಸುಬ್ರಹ್ಮಣ್ಯ ಅಯ್ಯರ್ ಅವರ ಪ್ರಥಮ ಸಂಗೀತಾಭ್ಯಾಸ ಅವರ ಸೋದರಮಾವಂದಿರೇ ಆದ ಮೇಲಟ್ಟೂರು ಗಣಪತಿ ಶಾಸ್ತ್ರಿಯವರಲ್ಲಿ ನಡೆಯಿತು. ಅನಂತರ ಮಾನಂಬುಚಾವಡಿ ವೆಂಕಟಸುಬ್ಬಯ್ಯರ್ ಅವರಲ್ಲಿ ಪ್ರೌಢ ಅಭ್ಯಾಸ ಮಾಡಿ ಪ್ರಸಿದ್ಧರಾದರು. ತಮ್ಮ ಮೂವತ್ತನೆಯ ವಯಸ್ಸಿನಲ್ಲಿ ಸಂಗೀತಕಚೇರಿಗಳನ್ನು ಮಾಡತೊಡಗಿ ಸಮಕಾಲೀನ ವಿದ್ವಾಂಸರ ಹೃತ್ಪೂರ್ವಕ ಮೆಚ್ಚಿಗೆ ಪಡೆದು ಅವರಿಗೆ ಸರಿಸಮಾನರಾಗಿ ನಿಂತರು. ಬೇಗಡೆ ರಾಗವನ್ನು ಹಾಡುವುದರಲ್ಲಿ ಅವರಿಗಿದ್ದ ಅಪಾರವಾದ ಪ್ರತಿಭೆ, ಮನೋಧರ್ಮಗಳನ್ನು ಕಂಡು ಅವರನ್ನು ಬೇಗಡೆ ಸುಬ್ರಹ್ಮಣ್ಯ ಅಯ್ಯರ್ ಎಂದೇ ಸಂಬೋಧಿಸುತ್ತಿದ್ದರಂತೆ. ತಮ್ಮ ಗುರುಪರಂಪರೆಯ ಹಿರಿಯರಾದ ತ್ಯಾಗರಾಜರ ಮಾರ್ಗ ಮತ್ತು ಶೈಲಿಯನ್ನು ಅನುಸರಿಸಿ ಹಲವಾರು ಪ್ರಸಿದ್ಧ ಕೃತಿಗಳನ್ನು ರಚನೆ ಮಾಡಿದ್ದಾರೆ. ಮುಖ್ಯವಾಗಿ ಇವರ ಕೃತಿಗಳ ಭಾಷೆ ತೆಲುಗು ಮತ್ತು ಸಂಸ್ಕೃತ. ತಿಲ್ಲಾನಗಳು, ವರ್ಣಗಳು, ಕೀರ್ತನೆಗಳು ಕೂಡಿದಂತೆ ನೂರಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ. ಇವರು ಮೈಸೂರು ವಾಸುದೇವಾಚಾರ್ಯರ ಗುರುಗಳು.

ಈ ಸಂಪುಟದಲ್ಲಿ ಸುಬ್ರಹ್ಮಣ್ಯ ಅಯ್ಯರ್ ಅವರ ಈ ಕೃತಿಗಳನ್ನು ಆರಿಸಿಕೊಂಡಿದೆ :

| | |
|---|---|
| ಪರಿದಾನಮಿಚ್ಚಿತೆ | ಬಿಲಹರಿ |
| ಸಂಕಲ್ಪಮೆಟ್ಟಿದೋ ಮನಸಾ | ಖರಹರಪ್ರಿಯ |
| ಮನಸು ಕರಗದೇಮಿ | ಹಂಸಧ್ವನಿ |

4. **ವೀಣಾ ಕುಪ್ಪಯ್ಯರ್.** 1798–1860. ಜನ್ಮಸ್ಥಳ ತಿರುವೆಟ್ರಿಯೂರ್. ತಂದೆ ವೀಣಾ ಸಾಂಬಯ್ಯರ್. ತಂದೆಯವರಲ್ಲೇ ಸಂಗೀತಾಭ್ಯಾಸವನ್ನು ಪ್ರಾರಂಭಿಸಿದ ಕುಪ್ಪಯ್ಯರ್ ಬಹು ಬೇಗ ಸಂಗೀತ ಪ್ರೌಢಿಮೆ ಗಳಿಸಿ ಪ್ರಸಿದ್ಧರಾದರು. ವೀಣೆಯಲ್ಲದೆ ಪಿಟೀಲು ನುಡಿಸುವುದರಲ್ಲಿಯೂ ಅಮೋಘ ಪರಿಣತಿ ಗಳಿಸಿದರು. ಸುಪ್ರಸಿದ್ಧ ವಾಗ್ಗೇಯಕಾರರೂ, ನಾದಬ್ರಹ್ಮರೆನಿಸಿದ ಸಂತರೂ ಆದ ತ್ಯಾಗರಾಜರೊಂದಿಗೆ ಕೆಲ ಸಮಯ ಇದ್ದು ಕೃತಿರಚನಾ ಕೌಶಲ ಮತ್ತು ತಂತ್ರಗಳನ್ನು ಅಭ್ಯಾಸ ಮಾಡಿದರು. ಇವರು 'ಗೋಪಾಲದಾಸ' ಎಂಬ ಅಂಕಿತದಿಂದ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಅಪೂರ್ವರಾಗವಾದ ನಾರಾಯಣಗೌಳ ವನ್ನು ಲೀಲಾಜಾಲವಾಗಿ ಹಾಡುತ್ತಿದ್ದುದರಿಂದ ಇವರಿಗೆ ನಾರಾಯಣಗೌಳ ಕುಪ್ಪಯ್ಯರ್ ಎಂದೇ ಹೆಸರಾಗಿತ್ತು. ಮೈಸೂರಿನ ಪ್ರಭು ಮುಮ್ಮಡಿ ಕೃಷ್ಣರಾಜರ ಆಳ್ವಿಕೆಯ ಅವಧಿಯಲ್ಲಿ (1707–1863) ಮೈಸೂರಿಗೆ ಬಂದಿದ್ದ ಕುಪ್ಪಯ್ಯರ್ ಅವರು

ಚಾಮುಂಡೇಶ್ವರಿಯನ್ನು ಕುರಿತು ಬೇಗಡೆ ರಾಗದಲ್ಲಿ 'ಇಂತ ಪರಾಕೇಲನವ್ವ' ಎಂಬ ಕೃತಿಯನ್ನು ರಚಿಸಿದರು. ಅನೇಕ ವರ್ಣ, ತಿಲ್ಲಾನಗಳಲ್ಲದೆ ಶಾಸ್ತ್ರೀಕ ಪಂಚರತ್ನ, ವೆಂಕಟೇಶಪಂಚರತ್ನಗಳೆಂಬ ಸಮುದಾಯ ಕೃತಿಗಳೂ ಇವರ ರಚನೆಗಳು. ಇವರ ಒಬ್ಬನೇ ಮಗ ತಿರುವೆಟ್ರಿಯೂರ್ ತ್ಯಾಗಯ್ಯರ್ ಅವರು ತಂದೆಯ ಕೃತಿಗಳೆಲ್ಲವನ್ನೂ ಸಂಕಲಿಸಿ 'ಪಲ್ಲವಿ ಸ್ವರಕಲ್ಪವಲ್ಲಿ' ಎಂಬ ಸಂಗೀತ ಲಕ್ಷ್ಯಗ್ರಂಥವನ್ನು ಬರೆದರು.

ಈ ಸಂಪುಟದಲ್ಲಿ ಕೃಷ್ಣಯ್ಯರ್ ಅವರ ಎರಡು ಕೃತಿಗಳನ್ನು ಸೇರಿಸಿದೆ :

| | |
|---|---|
| ಮಮ್ಮು ಬ್ರೋಚು | ಸಿಂಹೇಂದ್ರಮಧ್ಯಮ |
| ವಿನಾಯಕಾ ನಿನ್ನುವಿನಾ | ಹಂಸಧ್ವನಿ |

5. **ಸುಬ್ಬರಾಯಶಾಸ್ತ್ರಿ.** 1893–1862. ಪ್ರಸಿದ್ಧ ವಾಗ್ಗೇಯಕಾರರಾದ ಶ್ಯಾಮಾಶಾಸ್ತ್ರಿಗಳ ದ್ವಿತೀಯ ಕುಮಾರರು. 1803ರಲ್ಲಿ ತಂಜಾವೂರಿನಲ್ಲಿ ಜನಿಸಿದರು. ಬಾಲ್ಯದಿಂದಲೇ ತಂದೆಯವರಲ್ಲಿ ಸಂಗೀತಾಭ್ಯಾಸವೂ, ಸಂಸ್ಕೃತ, ತಮಿಳು, ತೆಲುಗು ಭಾಷೆಗಳಲ್ಲಿ ಪಾಂಡಿತ್ಯವೂ ಲಭಿಸಿತು. ಹಲವು ಕಾಲ ತ್ಯಾಗರಾಜರಲ್ಲಿಯೂ ಸಂಗೀತಾಭ್ಯಾಸ ಮಾಡಿದರು. ಆ ಕಾಲದಲ್ಲಿ ಪ್ರಖ್ಯಾತ ಹಿಂದೂಸ್ಥಾನೀ ಸಂಗೀತ ವಿದ್ವಾಂಸರಾಗಿದ್ದ ಕೋಕಿಲಕಂಠ ಮೇರುಸ್ವಾಮಿ, ರಾಮದಾಸಸ್ವಾಮಿ ಇವರಲ್ಲಿ ಅಭ್ಯಾಸ ಮಾಡಿ ಉತ್ತರದೇಯ ಪದ್ಧತಿಯ ಸಂಗೀತದಲ್ಲೂ ಪರಿಶ್ರಮ ಪಡೆದರು. ಹಾಡಿಕೆಯ ಜೊತೆಗೆ ಪಿಟೀಲು ಮತ್ತು ಸಾರಂಗಿ ವಾದ್ಯದಲ್ಲಿ ಪರಿಣತಿ ಪಡೆದಿದ್ದರು. ಹಲವಾರು ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿಯ ದೇವ ದೇವಿಯರನ್ನು ಕುರಿತು ಹಲವಾರು ಕೃತಿಗಳನ್ನು ರಚಿಸಿದರು.

ಸುಬ್ಬರಾಯಶಾಸ್ತ್ರಿಗಳ ಕೆಲವು ಪ್ರಸಿದ್ಧ ರಚನೆಗಳು ಇವು :

| | |
|---|---|
| ನಿನ್ನು ಸೇವಿಂಚಿನ | ಯದುಕುಲಕಾಂಭೋಜಿ |
| ಜನನೀ ನಿನ್ನುವಿನಾ | ರೀತಿಗೌಳ |
| ಏಮನಿ ನೇ | ಮುಖಾರಿ |
| ನಿನ್ನುವಿನಾ ಗತಿಗಾನ | ಕಲ್ಯಾಣಿ |

ಈ ಸಂಪುಟದಲ್ಲಿ ಸುಬ್ಬರಾಯ ಶಾಸ್ತ್ರಿಗಳ "ನಿನುವಿನಾ ಗತಿಗಾನ" ಕೃತಿಯನ್ನು ಸೇರಿಸಿದೆ.

6. **ಮೈಸೂರು ಸದಾಶಿವರಾವ್.** ಸದಾಶಿವರಾಯರ ಬಾಲ್ಯದ ವಿಚಾರವಾಗಿ ಹೆಚ್ಚು ತಿಳಿದುಬರುವುದಿಲ್ಲ. ಸ್ವಲ್ಪ ವಯಸ್ಸಾದ ಮೇಲೆ ವಾಲಾಜಪೇಟೆಯಲ್ಲಿ ಇದ್ದುಕೊಂಡು ತ್ಯಾಗರಾಜರ ಶಿಷ್ಯಪರಂಪರೆಗೆ ಸೇರಿದ ವೆಂಕಟರಮಣ ಭಾಗವತರಲ್ಲಿ ಶಿಷ್ಯ ವೃತ್ತಿ ಮಾಡಿದರು. ಶೀಘ್ರವೇ ಪ್ರಸಿದ್ಧ ವಿದ್ವಾಂಸರಾದ ಸದಾಶಿವರಾವ್ ಅವರು ಮೈಸೂರಿನಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್ ಮಹಾರಾಜರ ಸಮ್ಮುಖದಲ್ಲಿ ಹಾಡಿ ಅವರ ಮೆಚ್ಚಿಗೆಗೆ ಪಾತ್ರರಾದರು. ಆಸ್ಥಾನದ ವಿದ್ವಾಂಸಶ್ರೇಷ್ಠರಾದರು. ಅಂದಿನಿಂದಲೇ ಇವರಿಗೆ ಮೈಸೂರು ಸದಾಶಿವರಾವ್ ಎಂದು ಹೆಸರಾದುದು. ಈ ಕರ್ನಾಟಕ ಸಂಗೀತಕ್ಕೆ ಸದಾಶಿವರಾಯರ ಕೊಡುಗೆ ಅಮೂಲ್ಯ. ಅವರ ಹಲವಾರು ಕೃತಿಗಳು ನಮ್ಮ ದುರ್ದೈವದಿಂದ ನಷ್ಟವಾಗಿ ಹೋಗಿದ್ದು, 52 ಕೃತಿಗಳು ಮಾತ್ರ ದೊರೆತಿವೆ. ಮೈಸೂರಿನ ಸಂಗೀತ ಕಲಾಭಿವರ್ಧಿನಿ ಸಭೆಯವರು ಅವುಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸಿದ್ದಾರೆ. ಅಪರೂಪ ರಾಗಗಳಾದ ಪುನ್ನಾಗತೋಡಿ, ಚಂದ್ರಚೂಡ, ಗಂಭೀರನಾಟ ಮುಂತಾದವುಗಳಲ್ಲಿಯೂ ಕೃತಿರಚನೆ ಮಾಡಿದ್ದಾರೆ. ಪ್ರಸಿದ್ಧರಾದ ವೀಣಾ ಶೇಷಣ್ಣ ಮತ್ತು ಸುಬ್ಬಣ್ಣ ನವರು ಇವರ ಶಿಷ್ಯರು.

ಹರಿಕಾಂಭೋಜಿಯ 'ಸಾಕೇತನಗರನಾಥ', ಕಾಂಭೋಜಿಯ 'ಸಾಮ್ರಾಜ್ಯದಾಯಕೇಶ', ಅಠಾಣದ 'ವಾಚಾಮ ಗೋಚರುಂಡನಿ', ಭೈರವಿಯ 'ಶ್ರೀ ಪಾರ್ಥಸಾರಥಿ', ಸಾವೇರಿಯ 'ಶ್ರೀ ಕಾಮಕೋಟಿಪೀಠಸ್ಥಿತೇ', ಪೂರ್ವಿಕಲ್ಯಾಣಿಯ 'ಗಂಗಾಧರ' ಮುಂತಾದುವು ಇವರ ಸುಪ್ರಸಿದ್ಧ ರಚನೆಗಳು.

ಈ ಸಂಪುಟದಲ್ಲಿ ಸದಾಶಿವರಾಯರ 'ಗಂಗಾಧರ' ಎಂಬ ಕೃತಿಯನ್ನು ಸೇರಿಸಿದೆ.

8. **ಭದ್ರಾಚಲ ರಾಮದಾಸರು.** 1620–1688. ಇವರ ಮನೆತನದ ಹೆಸರು ಕಂಚೆರ್ಲಾ. ನಾಮಕರಣದ ಹೆಸರು ಗೋಪನ್ನ. ಆದರೆ ಭದ್ರಾಚಲದ ರಾಮದೇವರ ಉಪಾಸಕರಾದ ಇವರನ್ನು ಭದ್ರಾಚಲ ರಾಮದಾಸರೆಂದೇ ರೂಢಿಯಲ್ಲಿ ಕರೆದಿದೆ. ರಘುನಾಥಭಟ್ಟಾಚಾರ್ಯರೆಂಬುವರು ಇವರ ಗುರುಗಳು. ಚಿಕ್ಕಂದಿನಲ್ಲಿಯೇ ತೆಲುಗು ಮತ್ತು ಸಂಸ್ಕೃತಗಳಲ್ಲಿ ಅಮೋಘ ಪಾಂಡಿತ್ಯ ಗಳಿಸಿದರು. ವೃತ್ತಿಯಲ್ಲಿ ಭದ್ರಾಚಲದ ತಹಸೀಲ್ದಾರರಾಗಿದ್ದರು. ರಾಮದಾಸರ ಕೃತಿಗಳೆಲ್ಲ ಸಂಕೀರ್ತನ ರೂಪದಲ್ಲಿದ್ದು ರಾಮದೇವರ ಸ್ತುತಿಯಾಗಿವೆ. 100ಕ್ಕಿಂತಲೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ. 'ದಾಶರಥೀ ಶತಕಂ' ಅವರ ಸಾಹಿತ್ಯ ನಿರ್ಮಾಣ ಪ್ರತಿಭೆಗೆ ನಿದರ್ಶನ. 'ಎನ್ನಗಾನು ರಾಮಭಜನ', 'ಓರಾಮ ನೀನಾಮ', 'ಅಂತಾ ರಾಮಮಯಂ' ಮುಂತಾದುವು ಇವರ ಪ್ರಸಿದ್ಧ ಕೃತಿಗಳು.

ಈ ಸಂಪುಟದಲ್ಲಿ ರಾಮದಾಸರ 'ಎನ್ನಗಾನು ರಾಮಭಜನ' ಕೃತಿಯನ್ನು ಸೇರಿಸಿದೆ.

9. **ಶ್ಯಾಮಾಶಾಸ್ತ್ರಿ.** 1862–1927. 1862ರ ಏಪ್ರಿಲ್ 26ನೇ ತಾರೀಖು ತಂಜಾವೂರು ಜಿಲ್ಲೆಯ ತಿರುವಾರೂರಿನಲ್ಲಿ ಶ್ಯಾಮಾಶಾಸ್ತ್ರಿಗಳು ಜನಿಸಿದರು. ಅವರ ತಂದೆ ವಿಶ್ವನಾಥಶಾಸ್ತ್ರಿಯವರು ತಂಜಾವೂರಿನ ಮಹಾರಾಜ ತುಳಜಾಜಿಯವರ ಆಶ್ರಯ ಪಡೆದು ಅಲ್ಲಿ ನೆಲಸಿದ್ದರು. ಶ್ಯಾಮಾಶಾಸ್ತ್ರಿಗಳ ನಾಮಕರಣದ ಹೆಸರು ವೆಂಕಟಸುಬ್ರಹ್ಮಣ್ಯ. ಮನೆಯಲ್ಲಿ ಶ್ಯಾಮಕೃಷ್ಣ ಎಂದು ಕರೆಯುತ್ತಿದ್ದರು. ಬಾಲ್ಯದಿಂದಲೇ ಸಂಸ್ಕೃತ ಮತ್ತು ತೆಲುಗುಗಳಲ್ಲಿ ಅಪಾರ ಪಾಂಡಿತ್ಯ ಪಡೆದ ಶ್ಯಾಮಾಶಾಸ್ತ್ರಿಗಳು ಅನೇಕ ಅಪೂರ್ವ ಕೃತಿಗಳನ್ನು ರಚಿಸಿದ್ದಾರೆ. ಇವರ ಕೃತಿಗಳ ಸಾಹಿತ್ಯ ಸಂಸ್ಕೃತ ಮತ್ತು ತೆಲುಗಿನಲ್ಲಿವೆ. ಮಧುರೆಗೆ ಪ್ರಯಾಣ ಮಾಡುವಾಗ ಒಮ್ಮೆ ಮಾರ್ಗದಲ್ಲಿಯೇ ಮೀನಾಕ್ಷಿಯನ್ನು ಕುರಿತು 9 ನವರತ್ನ ಕೃತಿಮಾಲಿಕೆಯನ್ನು ರಚಿಸಿದರು.

ಕಾಮಾಕ್ಷಿಯನ್ನು ಕುರಿತ ಸ್ತುತಿರೂಪದ ಮೂರು ಸ್ವರಜತಿಗಳನ್ನು ರಚಿಸಿದ್ದಾರೆ. ಅವರ ಇತರ ಪ್ರಸಿದ್ಧ ಕೃತಿಗಳು :

| | |
|---|---|
| ತೋಡಿ | ನಿನ್ನೆ ನಮ್ಮಿನಾನು |
| ಪುನ್ನಾಗವರಾಳಿ | ಕನಕಶೈಲ ವಿಹಾರಿಣಿ |
| ಆನಂದಭೈರವಿ | ಓ ಜಗದಂಬ |
| ಮಧ್ಯಮಾವತಿ | ಪಾಲಿಂಚು ಕಾಮಾಕ್ಷಿ |

ಈ ಸಂಪುಟದಲ್ಲಿ ಶ್ಯಾಮಾಶಾಸ್ತ್ರಿಗಳ 'ಹಿಮಾದ್ರಿಸುತೆ' ಕೃತಿಯನ್ನು ಸೇರಿಸಿದೆ.

10. **ರಾಮನಾಡ್ ಶ್ರೀನಿವಾಸ ಅಯ್ಯಂಗಾರ್.** 1860–1919. 1860ರ ಆಗಸ್ಟ್ 16ರಂದು ತಮಿಳು ನಾಡಿನ ರಾಮನಾಥಪುರಂನಲ್ಲಿ ಜನಿಸಿದರು. ಬಾಲ್ಯದಲ್ಲೇ ಸಂಗೀತಾಭ್ಯಾಸವು ಖ್ಯಾತ ವಿದ್ವಾಂಸರಾದ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಅವರಲ್ಲಿ ನಡೆಯಿತು. ಬಹು ಬೇಗ ಅಸಾಧಾರಣ ಪಾಂಡಿತ್ಯ ಗಳಿಸಿ ಗುರುವಿನೊಂದಿಗೆ ಹಾಡತೊಡಗಿದರು. ಮಹಾ ವೈದ್ಯನಾಥಯ್ಯರ್ ಅವರಲ್ಲಿ ರಾಗ ತಾನ ಪಲ್ಲವಿ ಹಾಡುವುದನ್ನು ಅಭ್ಯಾಸಮಾಡಿದರು. ರಾಮನಾಥಪುರದ ಆಸ್ಥಾನ ವಿದ್ವಾಂಸರಾದರು. ಇವರ 100ರಷ್ಟು ಕೃತಿಗಳು ಈಗ ಬಳಕೆಯಲ್ಲಿವೆ. ಪಾಂಡಿತ್ಯಪೂರ್ಣವಾದ ವರ್ಣ, ಜಾವಳಿ, ತಿಲ್ಲಾನಗಳನ್ನೂ ಅನೇಕ ಕೃತಿಗಳನ್ನೂ ರಚಿಸಿದ್ದಾರೆ.

ಈ ಸಂಪುಟದಲ್ಲಿ ಶ್ರೀನಿವಾಸ ಅಯ್ಯಂಗಾರ್ಯರ ಈ ಕೃತಿಗಳನ್ನು ಸೇರಿಸಿದೆ :

| | |
|---|---|
| ಕೇದಾರಗೌಳ | ಸರಗುನ ಪಾಲಿಂಪ |
| ಶುದ್ಧ ಸಾವೇರಿ | ಸಾಮಜವರದ |

**11. ಪಲ್ಲವಿ ಗೋಪಾಲಯ್ಯರ್.** 18ನೇ ಶತಮಾನದ ಕೊನೆ ಅಥವಾ 19ನೇ ಶತಮಾನದ ಮೊದಲ ಭಾಗದಲ್ಲಿ ಇದ್ದರು. ಪಚ್ಚಿಮಿರಿಯಂ ಆದಿ ಅಪ್ಪಯ್ಯನವರ ಶಿಷ್ಯಪರಂಪರೆಗೆ ಸೇರಿದವರು. ಗುರುಕೃಪೆಗೆ ಪಾತ್ರರಾಗಿ ಗೋಪಾಲಯ್ಯರ್ ಬಹು ಶೀಘ್ರವಾಗಿಯೇ ರಾಗ ತಾನ ಮತ್ತು ಪಲ್ಲವಿ ಹಾಡುವುದರಲ್ಲಿ ಪರಿಣತಿ ಸಂಪಾದಿಸಿದರು. ತಂಜಾವೂರಿನ ಆಸ್ಥಾನ ವಿದ್ವಾಂಸರಾಗಿದ್ದರು. ಜನಪ್ರಿಯ ತಾನವರ್ಣಗಳಾದ ಕಲ್ಯಾಣಿ ಅಟ್ಟತಾಳದ 'ವನಜಾಕ್ಷಿ', ತೋಡಿಯ 'ಕನಕಾಂಗಿ ನೀಚೆಲಿಮಿ' ಇವರ ರಚನೆಗಳು. 'ವೆಂಕಟ' ಎಂಬ ಮುದ್ರೆ ಇವರ ಕೃತಿಗಳಲ್ಲಿದೆ.

ಗೋಪಾಲಯ್ಯರ್ ಅವರ ಇತರ ಕೆಲವು ಪ್ರಸಿದ್ಧ ಕೃತಿಗಳು :

| | |
|---|---|
| ತೋಡಿ | ಅಂಬ ನಾದು ವಿನ್ನಪಮು |
| ನಾಟಕುರಂಜಿ | ನೀದು ಮೂರ್ತಿನಿ |

ಈ ಸಂಪುಟದಲ್ಲಿ ಮೋಹನ ರಾಗದ 'ಶ್ರೀರಮಾ ರಮಣೀ ಮನೋಹರ' ತೋಡಿಯ 'ಅಂಬನಾದು ವಿನ್ನಪಮು' ಎಂಬ ಕೃತಿಗಳನ್ನು ಸೇರಿಸಿದೆ.

**12. ಸ್ವಾತಿ ತಿರುನಾಳ್ ಮಹಾರಾಜರು.** 1813–1846. ತಂಜಾವೂರು ರಾಜಮನೆತನದಲ್ಲಿ 1813ರಲ್ಲಿ ಜನಿಸಿದರು. ತ್ಯಾಗರಾಜರ ಸಮಕಾಲೀನರು. 18ನೆಯ ವಯಸ್ಸಿನ ವೇಳೆಗೆ ಸಂಸ್ಕೃತ, ತೆಲುಗು, ತಮಿಳು, ಮಲಯಾಳಂ, ಇಂಗ್ಲಿಷ್ ಭಾಷೆಗಳಲ್ಲಿ ಅಮೋಘ ಪಾಂಡಿತ್ಯ ಗಳಿಸಿ ರಾಜ್ಯಭಾರ ಸೂತ್ರ ವಹಿಸಿಕೊಂಡರು. ಉತ್ತರಾದಿ ಮತ್ತು ದಕ್ಷಿಣಾದಿ ಪದ್ಧತಿಗಳೆರಡರಲ್ಲೂ ಸಂಗೀತವನ್ನು ಅಭ್ಯಾಸಮಾಡಿ ಪರಿಣತಿ ಪಡೆದರು. ಕೃತಿರಚನಾ ಕುಶಲತೆಯಲ್ಲಿ ಅಮೋಘ ಪಟುತ್ವ ತೋರಿಸಿದರು. ಹಲವಾರು ಮಂದಿ ವಿದ್ವಾಂಸರನ್ನು ಪೋಷಿಸಿ ನರ್ತನಪಟುಗಳನ್ನೂ, ಕಲಾವಿದರನ್ನೂ ಮೇಳೈಸುತ್ತಿದ್ದರು.

ವರ್ಣ, ತಿಲ್ಲಾನ, ಪದ, ಜಾವಳಿ, ಕೀರ್ತನ, ಕೃತಿಭಜನ ಮುಂತಾದ ಹಲವಾರು ಪ್ರಕಾರಗಳಲ್ಲಿ ಸ್ವಾತಿ ತಿರುನಾಳ್ ಅವರು ನೂರಾರು ಕೃತಿಗಳನ್ನು ರಚಿಸಿದ್ದಾರೆ. ಪ್ರಸಿದ್ಧ ರಾಗಗಳಲ್ಲದೆ, ಸಾರಂಗನಾಟ, ಲಲಿತಪಂಚಮ,- ಗೋಪಿಕಾವಸಂತ ಮುಂತಾದ ಅಪರೂಪ ರಾಗಗಳಲ್ಲಿಯೂ ಕೃತಿರಚನೆ ಮಾಡಿದ್ದಾರೆ. ನವರಾತ್ರಿ ಕೀರ್ತನೆ ಮತ್ತು ನವರತ್ನಮಾಲಿಕಾ ಮೊದಲಾದ ಸಮುದಾಯ ಕೃತಿಗಳನ್ನು ರಚಿಸಿದ್ದಾರೆ. 'ಪನ್ನಗೇಂದ್ರ ಶಯನ' ಎಂಟು ರಾಗಗಳನ್ನು ಒಳಗೊಂಡ ರಾಗಮಾಲಿಕೆ, 'ಕಮಲಜಾಸ್ಯ' ಹರಿಯ 10 ಅವತಾರಗಳನ್ನು ವರ್ಣಿಸುವ ರಾಗಮಾಲಿಕೆ, 'ಭಾವಯಾಮಿ ರಘುರಾಮಂ' ರಾಮಾಯಣದ ಆರು ಕಾಂಡಗಳನ್ನು ನಿರೂಪಿಸುವ ಕೃತಿ. ಮೊದಲಿಗೆ ಸಾವೇರಿ ರಾಗದಲ್ಲಿದ್ದ ಇದನ್ನು ಸಂಗೀತಕಲಾನಿಧಿ ಸೆಮ್ಮಂಗುಡಿ ಆರ್. ಶ್ರೀನಿವಾಸ ಅಯ್ಯರ್ ಅವರು ರಾಗಮಾಲಿಕೆಗೆ ಅಳವಡಿಸಿದ್ದಾರೆ. 'ಕುಚೇಲೋಪಾಖ್ಯಾನ,' 'ಅಜಾಮಿಳೋಪಾಖ್ಯಾನ' ಮೊದಲಾದ ಹರಿಕಥಾ ಕಾಲಕ್ಷೇಪಕೆ ತಕ್ಕ ಕೃತಿಗಳನ್ನು ರಚಿಸಿದ್ದಾರೆ. ಪದ್ಮನಾಭಸ್ವಾಮಿ ದೇವಾಲಯದಲ್ಲಿ ವರ್ಷಕ್ಕೆ ಎರಡು ಬಾರಿ ನಡೆಯುವ ಉತ್ಸವವನ್ನು ವರ್ಣಿಸಿ 'ಉತ್ಸವ ಪ್ರಬಂಧಂ' ರಚಿಸಿದ್ದಾರೆ. 'ಪದ್ಮನಾಭ', 'ಪಂಕಜನಾಭ', 'ಸರಸಿಜನಾಭ', 'ಕಂಜನಾಭ', 'ಜಲಜನಾಭ' ಇತ್ಯಾದಿ ಮುದ್ರೆಗಳನ್ನು ಕೃತಿಗಳಲ್ಲಿ ಅಳವಡಿಸಿದ್ದಾರೆ. ಉತ್ತರಾದಿ ಪದ್ಧತಿಯಲ್ಲಿ ಧ್ರುಪದ್, ಖ್ಯಾಲ್, ತಪ್ಪ ಶೈಲಿಯಲ್ಲಿ 37 ಕೃತಿಗಳನ್ನು ರಚಿಸಿದ್ದಾರೆ.

ಈ ಸಂಪುಟದಲ್ಲಿ ಅವರ ಮಾಯಾಮಾಳವಗೌಳ ರಾಗದ 'ದೇವದೇವ ಕಲಯಾಮಿ' ಎಂಬ ಕೃತಿಯನ್ನು ಸೇರಿಸಿದೆ.

**13. ಮುತ್ತುಸ್ವಾಮಿ ದೀಕ್ಷಿತರು.** 1776–1835. 1776ರ ಮಾರ್ಚಿ 24ರಂದು ಮುತ್ತುಸ್ವಾಮಿ ದೀಕ್ಷಿತರು ತಿರುವಾರೂರಿನಲ್ಲಿ ಜನಿಸಿದರು. ತಂದೆ ಹಂಸಧ್ವನಿ ರಾಗಕರ್ತರಾದ ರಾಮಸ್ವಾಮಿ ದೀಕ್ಷಿತರು. ಬಾಲ್ಯದಲ್ಲಿ ಮುದ್ದುಸ್ವಾಮಿ ದೀಕ್ಷಿತರೆಂದು ಕರೆಯುತ್ತಿದ್ದರು. ಬಾಲ್ಯದಿಂದಲೇ ಸಂಗೀತದಲ್ಲಿ ಅಪಾರವಾದ ಆಸಕ್ತಿಯಿದ್ದ ದೀಕ್ಷಿತರು ಒಬ್ಬ ಶ್ರೀಮಂತರ ನೆರವಿನಿಂದ ಮಣಲಿಗೆ ಹೋದರು. ಅಲ್ಲಿ ಚಿದಂಬರನಾಥ ಯೋಗಿಯವರು ಇವರ ಪ್ರತಿಭೆಯನ್ನು ಗುರುತಿಸಿ, ಭವಿಷ್ಯತ್ತನ್ನು ಮನಗಂಡು, ಇವರ ಪತ್ನಿಯರನ್ನೂ ಇವರನ್ನೂ ಕಾಶಿಗೆ ಕರೆದುಕೊಂಡು ಹೋದರು. ಅಲ್ಲಿ ಯತಿಗಳಿಂದ ದೀಕ್ಷಿತರಿಗೆ ಶ್ರೀ ವಿದ್ಯಾ ಉಪದೇಶವಾಯಿತು.

ಗಂಗಾಸ್ನಾನ ಮಾಡಿ, ನೀರಿನಲ್ಲಿ ನಿಂತು ಗುರುವಾಜ್ಞೆಯಂತೆ ದೇವರನ್ನು ಪ್ರಾರ್ಥಿಸಲು ತಾನಾಗಿಯೇ ಒಂದು ವೀಣೆಯು ದೀಕ್ಷಿತರಿಗೆ ದೊರಕಿತು. ದಕ್ಷಿಣಕ್ಕೆ ಹಿಂದಿರುಗಿ ತಿರುತ್ತಣಿ ಎಂಬ ಕ್ಷೇತ್ರದಲ್ಲಿ ಧ್ಯಾನಾಸಕ್ತರಾಗಿದ್ದಾಗ ಸುಬ್ರಹ್ಮಣ್ಯ ಸ್ವಾಮಿಯು ಮಹಾಪುರುಷನೊಬ್ಬನ ರೂಪದಲ್ಲಿ ಬಂದು ಇವರ ಬಾಯಿಗೆ ಕಲ್ಲುಸಕ್ಕರೆ ಹಾಕಿದನಂತೆ. ಅಲ್ಲೇ ದೀಕ್ಷಿತರ ಕೃತಿರಚನಾ ಪ್ರತಿಭೆ ಕುಡಿವರಿದು 'ಶ್ರೀನಾಥಾದಿ ಗುರುಗುಹೋ ಜಯತಿ' ಎಂಬ ಮಾಯಾಮಾಳವಗೌಳದ ರಚನೆ ಹರಿಯಿತಂತೆ. ನವಗ್ರಹ ಕೃತಿಗಳು, ಷೋಡಶ ಗಣಪತಿ ಕೃತಿಗಳು, ನವಾವರಣ ಕೃತಿಗಳು, ಪಂಚಲಿಂಗಸ್ಥಳ ಕೃತಿಗಳು ಇತ್ಯಾದಿ ಸಮುದಾಯ ಕೃತಿಗಳಿಂದ ಕರ್ನಾಟಕ ಸಂಗೀತ ಭಂಡಾರವನ್ನು ಶ್ರೀಮಂತಗೊಳಿಸಿದ್ದಾರೆ ದೀಕ್ಷಿತರು. ಇವರ ಕೃತಿಗಳಲ್ಲಿ ರಾಗಮುದ್ರೆ, ಕ್ಷೇತ್ರಮುದ್ರೆ, ಪ್ರಬಂಧಮುದ್ರೆ, ರಾಜಮುದ್ರೆ ಮುಂತಾದುವನ್ನು ಕಾಣಬಹುದು.

ಈ ಸಂಪುಟದಲ್ಲಿ ಮುತ್ತುಸ್ವಾಮಿ ದೀಕ್ಷಿತರ ಈ ಕೃತಿಗಳನ್ನು ಸೇರಿಸಿದೆ :

| | |
|---|---|
| ಚಕ್ರವಾಕ | ಗಜಾನನಯುತಂ |
| ಶ್ರೀರಂಜನಿ | ಪರ್ವತರಾಜ ಕುಮಾರಿ |
| ಬಿಲಹರಿ | ಕಾಮಾಕ್ಷಿ ಶ್ರೀ ವರಲಕ್ಷ್ಮಿ |
| ಪೂರ್ವಿಕಲ್ಯಾಣಿ | ಮೀನಾಕ್ಷಿ ಮೇಮುದಂ ದೇಹಿ |
| ಪಂತುವರಾಳಿ | ರಾಮನಾಥಂ ಭಜೇಹಂ |
| ಶುದ್ಧಸಾವೇರಿ | ಲಲಿತಾಂಬಿಕಾಂ |

14. **ತ್ಯಾಗರಾಜರು.** 1767-1847. ಕರ್ನಾಟಕ ಸಂಗೀತದಲ್ಲಿ ಅಜರಾಮರವಾದ ಹೆಸರು ತ್ಯಾಗರಾಜರದು. ಕರ್ನಾಟಕ ಸಂಗೀತ ಮತ್ತು ತ್ಯಾಗರಾಜ ಎರಡೂ ಅನನ್ಯ ಎಂಬಷ್ಟುಮಟ್ಟಿಗೆ ಅದು ನೆಲೆಗೊಂಡಿದೆ. ಸುಪ್ರಸಿದ್ಧ ವಾಗ್ಗೇಯಕಾರರೂ, ಸಂತರೂ, ನಾದೋಪಾಸಕರೂ, ಶ್ರೀರಾಮನ ಭಕ್ತರೂ ಆದ ಶ್ರೀ ತ್ಯಾಗರಾಜರು 1767ರ ಮೇ 4ನೆಯ ದಿನದಂದು ತಿರುವಾರೂರಿನಲ್ಲಿ ಜನಿಸಿದರು. ತಂದೆ ರಾಮಬ್ರಹ್ಮ. ತ್ಯಾಗರಾಜರಿಗೆ ಸಂಸ್ಕೃತ, ತೆಲುಗು ಭಾಷೆಗಳಲ್ಲಿ, ವೇದ ವೇದಾಂಗಗಳಲ್ಲಿ ಆಮೂಲಾಗ್ರ ಅಭ್ಯಾಸ ಆಗಿತ್ತು. ಶೊಂಠಿ ವೆಂಕಟರಮಣಯ್ಯ ಎಂಬುವರಲ್ಲಿ ಸಂಗೀತಾಭ್ಯಾಸ ಮಾಡಿದರು. ತಂದೆಯ ಕಾಲಾನಂತರ ಅವರ ಪೂಜಾವಿಗ್ರಹ ಶ್ರೀರಾಮ ಸೀತಾ ಲಕ್ಷ್ಮಣ ಪಂಚಾಯತನ ವಿಗ್ರಹವನ್ನು ಪರಮ ಭಕ್ತಿಯಿಂದ ಆರಾಧಿಸುತ್ತ ಬಂದರು. ಉಂಛವೃತ್ತಿಯಿಂದ ಜೀವನ ನಡೆಸಿದರು. ಭಕ್ತಿಯೇ ಅವರ ಸರ್ವಸ್ವವೂ ಆಯಿತು. ನಾದ ಅವರ ಉಸಿರಾಯಿತು. 96 ಕೋಟಿ ರಾಮನಾಮ ಜಪ ಮಾಡಿ ಶ್ರೀರಾಮಚಂದ್ರನ ಸಾಕ್ಷಾತ್ ದರ್ಶನವನ್ನು ಪಡೆದಿದ್ದರಂತೆ. ಅಸಂಖ್ಯಾತವಾಗಿ ಕೃತಿಗಳನ್ನು ರಚಿಸಿದರು. ದಿವ್ಯನಾಮ ಸಂಕೀರ್ತನೆಗಳು, ಉತ್ಸವ ಸಂಪ್ರದಾಯ ಕೀರ್ತನೆಗಳು, ಕೋವೂರು, ಲಾಲ್‌ಗುಡಿ, ತಿರುವೆಟ್ರಿಯೂರ್ ಪಂಚರತ್ನ ಕೀರ್ತನೆಗಳು, ಘನರಾಗ ಪಂಚರತ್ನ ಕೃತಿಗಳು—ಮೊದಲಾದ ಸಮುದಾಯ ಕೃತಿಗಳನ್ನು ರಚಿಸಿದರು. ಇವರ 'ಪ್ರಹ್ಲಾದ ಭಕ್ತಿವಿಜಯ', 'ನೌಕಾಚರಿತ್ರ' ಮತ್ತು 'ಸೀತಾರಾಮ ವಿಜಯ' ಮೂರು ಪ್ರಸಿದ್ಧ ಗೇಯ ನಾಟಕಗಳು.

ಅನೇಕಾನೇಕ ಶಿಷ್ಯರನ್ನು ನಿರ್ಮಿಸಿ, ಕರ್ನಾಟಕ ಸಂಗೀತಕ್ಕೆ ಭವ್ಯವಾದ ಒಂದು ಪರಂಪರೆಯನ್ನು ಹಾಕಿದ ತ್ಯಾಗರಾಜರು ನಾದೋಪಾಸಕರಲ್ಲಿ ಅಗ್ರಗಣ್ಯರು. ಇವರ ರಚನೆಗಳು ಅನೇಕ ಕೃತಿಗಳ ರೂಪದಲ್ಲಿ ಪ್ರಕಟವಾಗಿವೆ.

ಈ ಸಂಪುಟದಲ್ಲಿ ತ್ಯಾಗರಾಜರ ಈ ಕೃತಿಗಳನ್ನು ಸೇರಿಸಿದೆ :

| | |
|---|---|
| ತೋಡಿ | ರಾಜುವೆಡಲ |
| ಚಕ್ರವಾಕ | ಎಟುಲ ಬ್ರೋತುವೋ |
| | ಸುಗುಣಮುಲೇ |
| ಶ್ರೀರಂಜನಿ | ಸರಿಯೆವ್ವರೇ |
| | ಸೊಗಸುಗಾ ಮೃದಂಗ ತಾಳಮು |
| ಕೇದಾರಗೌಳ | ತುಳಸೀಬಿಲ್ವ ಮಲ್ಲಿಕಾದಿ |

| | |
|---|---|
| ಹರಿಕಾಂಭೋಜಿ | ದಿನಮಣಿವಂಶ ತಿಲಕ |
| | ಎಂತರಾನಿ ತನಕೆಂತಪೋನಿ |
| | ಚನಿತೋಡಿ |
| ಕೇದಾರ | ರಾಮಾ ನೀಪೈ ತನಕು |
| | ವರಕೇವಾಡನಾ |
| ಪೂರ್ವಿಕಲ್ಯಾಣಿ | ಪರಲೋಕಸಾಧನಮೇ ಮನಸಾ |
| ಖರಹರಪ್ರಿಯ | ವಿಡಮುಸೇಯವೇ ನನ್ನು |
| | ರಾಮ ನೀ ಸಮಾನಮೆವರು |
| ಕಲ್ಯಾಣಿ | ನಿಧಿ ಚಾಲ ಸುಖಮಾ |
| ಮಾಯಾಮಾಳವಗೌಳ | ವಿದುಲಕು ಮ್ರೊಕ್ಕೆದ |
| ಮಧ್ಯಮಾವತಿ | ವಿನಾಯಕುನಿವಲೆನು |
| | ಅಲಕಲಲ್ಲಲಾಡಗಗನಿ |
| ಶಂಕರಾಭರಣ | ಏಮಿನೇರಮು |
| | ಎದುಟ ನಿಲಚಿತೇ |
| | ಸ್ವರರಾಗ ಸುಧಾರಸಯುತ |
| ಮೋಹನ | ಮೋಹನರಾಮ |
| ಹಂಸಧ್ವನಿ | ರಘುನಾಯಕ |

15. **ಆನಯ್ಯ.** 1800-1832. ತಂಜಾವೂರಿನ ದೊರೆ ಎರಡನೆಯ ಶರಭೋಜಿಯ ಆಸ್ಥಾನದಲ್ಲಿ ಆನೈಅಯ್ಯರ್ ಮತ್ತು ಅಯ್ಯಾಮಯ್ಯರ್ ವಿದ್ವಾಂಸರಾಗಿದ್ದರು. ಸಂಸ್ಕೃತ, ತೆಲುಗು, ತಮಿಳು ಭಾಷೆಗಳಲ್ಲಿ ಮಹಾ ಪ್ರತಿಭಾವಂತರಾಗಿದ್ದರು. ಸಾಮಾನ್ಯವಾಗಿ ಸೋದರರಿಬ್ಬರೂ ಕೂಡಿಯೇ ಹಾಡುತ್ತಿದ್ದರು. ಆದರೆ ರಚನೆಗಳನ್ನೂ ಇಬ್ಬರೂ ಕೂಡಿಯೇ ಮಾಡಿದರೆ ಎಂಬ ಬಗ್ಗೆ ಸಂದೇಹವಿದೆ. ಆನಯ್ಯನವರ ರಚನೆಗಳಲ್ಲಿ 'ಉಮಾದಾಸ' ಎಂಬ ಅಂಕಿತವಿದೆ.

ಈ ಸಂಪುಟದಲ್ಲಿ ಆನಯ್ಯನವರ ಕೇದಾರರಾಗದ 'ಭಜನ ಸೇಯವೇ' ಕೃತಿಯನ್ನು ಆರಿಸಿದೆ.

16. **ಪಾಪನಾಶಂ ಶಿವಂ.** 1890. ತಂಜಾವೂರು ಜಿಲ್ಲೆಯ ನನ್ನಿಲಂ ತಾಲ್ಲೂಕಿನ ಪೋಲಹಂ ಎಂಬ ಗ್ರಾಮದಲ್ಲಿ ಜನಿಸಿದ ಇವರ ನಾಮಕರಣದ ಹೆಸರು ರಾಮಯ್ಯ. ಪಾಪ ಪರಿಹಾರಾರ್ಥವಾಗಿ ಯಾವಾಗಲೂ ಪುಣ್ಯಕ್ಷೇತ್ರಗಳ ಯಾತ್ರೆ ಮಾಡುತ್ತಲೇ ಇದ್ದುದರಿಂದ ಪಾಪನಾಶಂ ಶಿವಂ ಎಂದೇ ಇವರಿಗೆ ಹೆಸರಾಯಿತು. ತಿರುವನಂತಪುರದ ಸಂಸ್ಕೃತ ಕಾಲೇಜಿನಲ್ಲಿ ವ್ಯಾಸಂಗ. ವ್ಯಾಕರಣಪಂಡಿತ ಪದವಿ. ಸಂಗೀತಾಭಿರುಚಿ ಬಹಳವಾಗಿದ್ದ ಶಿವಂ ಅವರು ನೀಲಕಂಠದಾಸರೆಂಬ ಭಕ್ತ ವಾಗ್ಗೇಯಕಾರರ ಅನುಗ್ರಹದಿಂದ ಸಂಗೀತ ಕಲಿತು ಕೃತಿರಚನೆ ಮಾಡಿದರು. ನೀಲಕಂಠದಾಸರ ಹಲವು ಕೃತಿಗಳನ್ನು ಪ್ರಚಾರಪಡಿಸಿದರು. ಕೃತಿಗಳಲ್ಲದೆ 'ಶ್ರೀರಾಮಚರಿತ ಗೀತಂ' ಎಂಬ ರಾಮಾಯಣವನ್ನು ನಿರೂಪಿಸುವ ಸಣ್ಣ ಕೃತಿಮಾಲಿಕೆಯೊಂದನ್ನು ರಚಿಸಿದ್ದಾರೆ. ಹಲವಾರು ಹರಿಕಥೆಗಳನ್ನು ರಚಿಸಿದ್ದಾರೆ.

*　　*　　*　　*　　*

ಸ್ಥೂಲವಾಗಿ ಸಂಗೀತ ರಚನಾ ಪ್ರಕಾರಗಳ ಲಕ್ಷಣಗಳು ಹೀಗಿರುತ್ತವೆ :

**ಸ್ವರಜತಿ :** ಅಭ್ಯಾಸಗಾನಕ್ಕೆ ಸೇರಿದ ಪ್ರೌಢರೀತಿಯ ರಚನೆ. ಧಾತುವು ಸಾಮಾನ್ಯವಾಗಿ 3, 5, 7 ಜತಿ ಕ್ರಮದ ಗುಂಪಿನ ಜೋಡಣೆಯಿಂದ ಹೆಣೆಯಲ್ಪಟ್ಟಿರುತ್ತದೆ. ಮಾತು ಭಾಗವು ಕೆಲವು ವೇಳೆ ದೇವತಾಪ್ರಾರ್ಥನೆಯಿಂದಲೂ ಕೆಲವು ವೇಳೆ ಶೃಂಗಾರಭಾವದಿಂದಲೂ ಕೂಡಿರುತ್ತದೆ. ಶ್ಯಾಮಾಶಾಸ್ತ್ರಿಗಳು ರಚಿಸಿರುವ ಕಾಮಾಕ್ಷಿದೇವಿಯ ಸ್ತುತಿಯಿಂದ ಕೂಡಿರುವ ಈ ರಚನೆಗಳನ್ನು ಕೆಲವು ವೇಳೆ ಸಭಾ ಕಛೇರಿಗಳಲ್ಲಿಯೂ ಹಾಡುವುದನ್ನು ಕೇಳಬಹುದು. ಈ ಸ್ವರಜತಿಗಳು ರಚನಾ ಪ್ರಕಾರಗಳಲ್ಲಿಯೇ ಅತ್ಯುತ್ತಮವಾದ ರಚನೆಯಾಗಿದ್ದು ರತ್ನತ್ರಯವೆಂದು ಹಲವು ತಜ್ಞರು ಇವನ್ನು ಸಂಬೋಧಿಸಿರುತ್ತಾರೆ. ಈ ಪ್ರಕಾರದ ಸ್ವರೂಪವನ್ನು ಇದರ ಹೆಸರೇ ಸೂಚಿಸುವಂತೆ ಸ್ವರದ ಜೋಡಣೆಗಳೂ, ಅದಕ್ಕೆ ಸಾಮಾನ್ಯವಾಗಿ ಹೆಣೆಯುವ ಯಥಾಕ್ಷರ ಸಾಹಿತ್ಯವೂ ರೂಪಿಸುತ್ತವೆ. ಸಾಹಿತ್ಯದ ಅರ್ಥವು ಭಿನ್ನಭಿನ್ನವಾಗಿ ರೂಪಿಸಲ್ಪಡುತ್ತದೆ. ಸ್ವರಜತಿಯನ್ನು ಹಾಡುವುದು ಜತಿಸ್ವರವನ್ನು ಹಾಡುವ ಕ್ರಮದಲ್ಲಿಯೇ ಆದರೂ ಇಲ್ಲಿ ಸಾಹಿತ್ಯವನ್ನು ಸೇರಿಸಿರುತ್ತಾರೆ. ಈ ರಚನೆಯಲ್ಲಿಯೂ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳೆಂಬ ಮೂರು ಭಾಗಗಳನ್ನೂ ಕಾಣಬಹುದು. ಪಲ್ಲವಿಯನಂತರ ಅನುಪಲ್ಲವಿಯನ್ನು ಹಾಡಿ ಪ್ರತಿಯೊಂದು ಚರಣದ ಅಂತ್ಯದಲ್ಲಿಯೂ ಪಲ್ಲವಿಯನ್ನು ಪುನರಾವರ್ತಿಸಲಾಗುವುದು. ಶ್ಯಾಮಾಶಾಸ್ತ್ರಿಗಳು ರಚಿಸಿರುವ ಸ್ವರಜತಿಗಳಲ್ಲಿ ಅನುಪಲ್ಲವಿಯ ಭಾಗವು ಕಂಡು ಬರುವುದಿಲ್ಲ. ಈ ರಚನಾ ಪ್ರಕಾರಗಳನ್ನು ರಚಿಸಿದವರಲ್ಲಿ ಶ್ಯಾಮಾಶಾಸ್ತ್ರಿ, ಸ್ವಾತಿ ತಿರುನಾಳ್ ಮಹಾರಾಜರು, ಚಿನ್ನಿಕೃಷ್ಣದಾಸರು, ಪೊನ್ನಯ್ಯ ಸಹೋದರರು, ಮತ್ತು ವೀಣೆ ಶೇಷಣ್ಣನವರು ಇವರ ಹೆಸರುಗಳು ಸ್ಮರಣೀಯವಾದುವು.

**ಜತಿಸ್ವರ :** ಹಾಡುವ ಕ್ರಮ, ಚೌಕಟ್ಟು ಸ್ವರಜತಿಯನ್ನೇ ಹೋಲುತ್ತಿದ್ದರೂ, ಈ ಪ್ರಕಾರದಲ್ಲಿ ಸಾಹಿತ್ಯ ಕಾಣಬರುವುದಿಲ್ಲ. ಸ್ವರಸಮೂಹವು ಜತಿಯ ಕ್ರಮವಾಗಿ ಸಾಮೂಹಿಕವಾಗಿ ಹೆಣೆಯಲ್ಪಟ್ಟು ಭರತನಾಟ್ಯರಚನಾ ಪ್ರಕಾರವೆಂದು ಪ್ರಸಿದ್ಧಿ ಪಡೆದಿರುತ್ತದೆ. ನಾಟ್ಯಕಲಾವಿದರ ಪಾದಕುಶಲತೆಗೆ ಯೋಗ್ಯವಾದ ಪ್ರಕಾರ ನಾಟ್ಯಶಾಸ್ತ್ರ ಪ್ರಯೋಗ ಕೋವಿದರಾದ ತಂಜಾವೂರು ಪೊನ್ನಯ್ಯ, ಚಿನ್ನಯ್ಯ, ವಡಿವೇಲು ಸಹೋದರರು ಹಲವಾರು ಜತಿಸ್ವರಗಳನ್ನು ರಚಿಸಿರುವರು. ಹಲವಾರು ರಾಗಮಾಲಿಕಾ ಜತಿಸ್ವರಗಳೂ ಬಳಕೆಯಲ್ಲಿವೆ. ಕೆಲವು ಜತಿಸ್ವರಗಳಲ್ಲಿ ಜತಿ ಅಥವಾ ಸೊಲ್ಕಟ್ಟು ಸ್ವರಗಳು ರಚನೆಯ ಪ್ರಥಮದಲ್ಲಿಯೂ, ಅಂತ್ಯದಲ್ಲಿಯೂ ಕಂಡುಬರುತ್ತವೆ. ಲಯದ ಚೌಕಟ್ಟಿಗೆ ಒಳಪಡುವಂತಹ ತಾಳಪ್ರಧಾನವಾದ ರಚನೆ. ಈ ರಚನೆಯನ್ನು ಸ್ವರಪಲ್ಲವಿಯೆಂದೂ ಕರೆಯುವುದು ವಾಡಿಕೆ. ಇವುಗಳನ್ನು ಚೌಕವಾಗಿಯೂ, ಮಧ್ಯಮ ಕಾಲದಲ್ಲಿಯೂ ಹಾಡಬಹುದು.

**ವರ್ಣ :** ರಾಗ ಭಾವ ಸಮನ್ವಿತವಾದ ಪಾಂಡಿತ್ಯಪೂರ್ಣವಾದ ರಚನೆ. ಇಲ್ಲಿ ವಿಶೇಷವಾಗಿ ಸಂಗೀತಕ್ಕೆ ಪ್ರಾಮುಖ್ಯತೆಯಿರುವುದು. ಸಾಹಿತ್ಯಭಾಗವು ಕಡಿಮೆಯಿರುವುದು. ನಮ್ಮ ಸಂಗೀತದಲ್ಲಿ ಈ ರಚನೆಗಳನ್ನು ವಿದ್ಯಾರ್ಥಿಗಳು ಕೃತಿಗಳನ್ನು ಕಲಿಯುವುದಕ್ಕೆ ಮುಂಚೆ ಕಲಿಯುವರು. ಸಾಹಿತ್ಯ ಭಕ್ತಿರಸಪೂರಿತವಾಗಿಯೂ, ಶೃಂಗಾರರಸಯುಕ್ತವಾಗಿಯೂ ಇರಬಹುದು. ವರ್ಣದಲ್ಲಿ ಎರಡು ಪ್ರಮುಖ ಭಾಗಗಳನ್ನು ಕಾಣಬಹುದು. 1. ಪೂರ್ವಾಂಗ 2. ಉತ್ತರಾಂಗ. ಪೂರ್ವಾಂಗವೆಂದರೆ, ಪಲ್ಲವಿ, ಅನುಪಲ್ಲವಿ, ಮುಕ್ತಾಯಸ್ವರದಿಂದ ಕೂಡಿರುವ ಭಾಗ. ಉತ್ತರಾಂಗವೆಂದರೆ ಚರಣ. ಚರಣವು ಸ್ವರ ಅಥವ ಎತ್ತುಗಡೆ ಸ್ವರಗಳಿಂದ ಕೂಡಿರುತ್ತದೆ. ವರ್ಣಗಳಲ್ಲಿರುವ ಚರಣವನ್ನೇ ಚಿಟ್ಟೆಪಲ್ಲವಿಯೆಂದೂ, ಉಪಪಲ್ಲವಿಯೆಂದೂ, ಎತ್ತುಗಡೆ ಪಲ್ಲವಿಯೆಂದೂ ಸಂಬೋಧಿಸುವುದುಂಟು. ವರ್ಣಗಳಲ್ಲಿ ಮುಖ್ಯವಾಗಿ ಎರಡು ಪ್ರಭೇದಗಳುಂಟು. ಅವು ತಾನವರ್ಣ ಮತ್ತು ಪದವರ್ಣ.

**ತಾನವರ್ಣ :** ತಾನವರ್ಣಗಳಲ್ಲಿ ಸಾಮಾನ್ಯವಾಗಿ ಪಲ್ಲವಿ, ಅನುಪಲ್ಲವಿ, ಚರಣಗಳಿಗೆ ಸಾಹಿತ್ಯವಿರುವುದು. ಪ್ರತಿ ಸಾಹಿತ್ಯದ ಅಕ್ಷರಗಳ ಅಂತರದಲ್ಲಿ ಅಕಾರ, ಇಕಾರ, ಉಕಾರಗಳನ್ನು ಸೇರಿಸಿ ಹಾಡಬೇಕಾಗುವುದು. ವರ್ಣವನ್ನು ಹಾಡುವಾಗ ಮೊದಲು ಪೂರ್ವಾಂಗವನ್ನು ಹಾಡಿ ಪಲ್ಲವಿಯನ್ನು ಪುನಃ ಹಾಡಿ ನಿಲ್ಲಿಸಬೇಕು. ನಂತರ ಚರಣವನ್ನು ಹಾಡಿ ಎತ್ತುಗಡೆ ಸ್ವರಗಳ ಅಂತ್ಯದಲ್ಲಿಯೂ ಚರಣವನ್ನು ಪುನರಾವರ್ತಿಸಬೇಕು. ತಾನವರ್ಣಗಳನ್ನು ಆದಿ, ರೂಪಕ, ಝಂಪೆ, ತ್ರಿಪುಟ, ಅಟ್ಟ ಮುಂತಾದ ತಾಳಗಳಲ್ಲಿಯೂ ನೋಡಬಹುದು. ಇವುಗಳನ್ನು ಸಂಗೀತ ಕಛೇರಿಯ ಪ್ರಾರಂಭದಲ್ಲಿ ಹಾಡುತ್ತಾರೆ. ಇವು ರಾಗದ ರಾಗರಂಜಕ ಪ್ರಯೋಗಗಳನ್ನೂ ವಿಶೇಷ ಸಂಚಾರಗಳನ್ನೂ ಅಪೂರ್ವ ಪ್ರಯೋಗಗಳನ್ನೂ ತಿಳಿಸುತ್ತವೆ. ಅಭ್ಯಾಸಗಾನದಲ್ಲಿ ವರ್ಣಗಳು ಬಹಳ ಮುಖ್ಯವಾದುವು. ತಾನದ ಶೈಲಿಯನ್ನು ಹೊಂದಿರುವುದರಿಂದ ಈ ಪ್ರಕಾರಗಳಿಗೆ ತಾನವರ್ಣಗಳೆಂದು ಸಂಬೋಧಿಸುವುದು ಉಚಿತವಾಗಿದೆ.

**ಪದವರ್ಣ:** ತಾನವರ್ಣದಂತೆ ಪಲ್ಲವಿ, ಅನುಪಲ್ಲವಿ, ಚರಣ, ಎತ್ತುಗಡೆ ಸ್ವರಗಳನ್ನೊಳಗೊಂಡ ಭರತನಾಟ್ಯ ರಚನೆ. ಇವುಗಳಿಗೆ ಚೌಕವರ್ಣಗಳೆಂದು ಹೆಸರು. ಇವುಗಳಲ್ಲಿ ಪ್ರತಿಯೊಂದು ಭಾಗಕ್ಕೂ ಸಾಹಿತ್ಯವು ಇದ್ದು ಅವು ಶೃಂಗಾರ ಭಾವವನ್ನು ಪ್ರತಿಪಾದಿಸುತ್ತವೆ. ಈ ರಚನೆಯಲ್ಲಿ ಸಾಹಿತ್ಯಾರ್ಥದ ಹಲವಾರು ಭಾವಗಳನ್ನು ಪುಷ್ಟೀಕರಿಸಲು ಅಭಿನಯಕ್ಕೆ ಅವಕಾಶವನ್ನುಂಟುಮಾಡುತ್ತದೆ. ಕೆಲವು ಪದವರ್ಣಗಳಲ್ಲಿ ಸಾಹಿತ್ಯದ ನಡುವೆ ಸೊಲ್ಕಟ್ಟು ಅಥವಾ ಪಾಠಾಕ್ಷರಗಳನ್ನು ಸೇರಿಸಿರುತ್ತಾರೆ. ನಿಧಾನವಾದ ಲಿಪ್ಪಿನಲ್ಲಿ ಹೇಳಲ್ಪಟ್ಟ ಸ್ವರದ ಭಾಗಕ್ಕೆ ಪಾದಕೆಲಸವನ್ನೂ, ಸಾಹಿತ್ಯಭಾಗಕ್ಕೆ ಅಭಿನಯವನ್ನೂ ಮಾಡುತ್ತಾರೆ. ವೀಣಾ ಕುಪ್ಪಯ್ಯರ್, ಪಟ್ಣಂ ಸುಬ್ರಹ್ಮಣ್ಯಯ್ಯರ್, ತಂಜಾವೂರು ಪೊನ್ನಯ್ಯಪಿಳ್ಳೆ ಸಹೋದರರು, ಶ್ರೀನಿವಾಸ ಅಯ್ಯಂಗಾರ್ಯರು ಮುಂತಾದ ವಾಗ್ಗೇಯಕಾರರು ಹಲವಾರು ತಾನವರ್ಣಗಳನ್ನು ರಚಿಸಿರುವರು.

**ಕೃತಿ:** ಸಂಗೀತ ರಚನೆ ಪ್ರಕಾರಗಳಲ್ಲಿ ಇದು ಮುಖ್ಯವಾದದ್ದು. ಇಲ್ಲಿಯ ಸಾಹಿತ್ಯಸಾಮಾನ್ಯವಾಗಿ ದೇವತಾಸ್ತುತಿ ಅಥವಾ ತತ್ವ-ನೀತಿ. ಧಾತುವಿಗೆ ಪ್ರಧಾನವಾದ ಸ್ಥಾನವಿರುವ ರಚನೆ. ಕೃತಿಗಳಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳೆಂಬ ವಿಭಾಗಗಳಿರುವುದು. ಕೆಲವು ವೇಳೆ ಪಲ್ಲವಿ ಮತ್ತು ಚರಣಗಳು ಮಾತ್ರವೇ ಇರುವುದುಂಟು. (ಸಮಷ್ಟಿ ಚರಣಕೃತಿಗಳು) ಮುದ್ದುಸ್ವಾಮಿ ದೀಕ್ಷಿತರ ಕೃತಿಗಳಲ್ಲಿ ಈ ಲಕ್ಷಣವನ್ನು ಸಾಮಾನ್ಯವಾಗಿ ಕಾಣಬಹುದು. ಮತ್ತೆ ಕೆಲವು ವೇಳೆ ಹಲವು ಚರಣಗಳನ್ನು ಅಲ್ಲಿಯ ಸಾಹಿತ್ಯವನ್ನೇ ಒಂದೇ ಧಾತುವಿಗೋ ಬೇರೆ ಬೇರೆ ಧಾತುಗಳಿಗೋ ಅಳವಡಿಸಿರುವುದುಂಟು. ಒಂದೇ ಧಾತುವಿನಲ್ಲಿದ್ದರೆ ಎಲ್ಲಾ ಮತ್ತು ಮುದ್ರಾಚರಣವನ್ನೂ, ಬೇರೆ ಬೇರೆ ಧಾತುಗಳಲ್ಲಿದ್ದರೆ ಎಲ್ಲ ಚರಣಗಳನ್ನೂ ಹಾಡುವುದು ಪದ್ಧತಿ. ಕೃತಿಗಳನ್ನು ಹಾಡುವಾಗ ಸೌಂದರ್ಯವರ್ಧನೆಗಾಗಿ ಸಂಗತಿ, ಚಿಟ್ಟೆಸ್ವರ, ಸೊಲ್ಕಟ್ಟು ಸ್ವರ, ಮಧ್ಯಮಕಾಲ ಸಾಹಿತ್ಯ, ಸ್ವರಸಾಹಿತ್ಯ ಮುಂತಾದುವುಗಳನ್ನೂ ಸೇರಿಸಲು ವಾಗ್ಗೇಯಕಾರರಿಗೆ ಸ್ವಾತಂತ್ರ್ಯವಿರುತ್ತದೆ.

ಕೀರ್ತನೆಗಳೂ ಕೃತಿಯನ್ನು ಹೋಲುವಂತಹ ರಚನೆಗಳೇ. ಇಲ್ಲಿನ ಸಾಹಿತ್ಯ ಭಾಗವು ಭಕ್ತಿರಸಪ್ರಧಾನವಾದ ಭಗವನ್ನಾಮ ಸ್ತುತಿಯಾಗಿರುತ್ತದೆ. ಧಾತು ಸರಳವಾಗಿರುತ್ತದೆ. ಸಾಮಾನ್ಯವಾಗಿ ಇವು ಗೋಷ್ಠಿಗಾನಕ್ಕೆ ಚೆನ್ನಾಗಿ ಅಳವಡುವ ರಚನೆಗಳು.

ಕೀರ್ತನ ಮತ್ತು ಕೃತಿ ಕರ್ತೃಗಳಲ್ಲಿ ತಾಳ್ಳಪಾಕಂ ವಾಗ್ಗೇಯಕಾರರು, ಪುರಂದರದಾಸರು, ಭದ್ರಾಚಲ ರಾಮದಾಸರು, ನಾರಾಯಣತೀರ್ಥರು, ತ್ಯಾಗರಾಜರು, ಮುದ್ದುಸ್ವಾಮಿ ದೀಕ್ಷಿತರು, ಶ್ಯಾಮಾಶಾಸ್ತ್ರಿಗಳು, ವೀಣಾ ಕುಪ್ಪಯ್ಯರ್, ಪಟ್ಣಂ ಸುಬ್ರಹ್ಮಣ್ಯ ಅಯ್ಯರ್, ಪೂಚಿ ಶ್ರೀನಿವಾಸ ಅಯ್ಯಂಗಾರ್, ಮೈಸೂರು ವಾಸುದೇವಾಚಾರ್ಯ, ಮೈಸೂರು ಸದಾಶಿವರಾವ್— ಇವರ ಹೆಸರು ಸ್ಮರಣೀಯವಾಗಿವೆ.

ಪ್ರಸ್ತುತ ಸಂಪುಟದಲ್ಲಿ ವಿದ್ಯಾರ್ಥಿಗಳು ಕಲಿಯಲೇಬೇಕಾದ ಜತಿಸ್ವರ, ಸ್ವರಜತಿ ಮತ್ತು ವರ್ಣಗಳು ಕೆಲವನ್ನು ಮೊದಲಿಗೆ ಕೊಟ್ಟು ಅನಂತರ ಕೃತಿಗಳನ್ನು ಅನುಕ್ರಮವಾಗಿ ಜೋಡಿಸಿದೆ. ಮೊದಲಿಗೆ ಕೃತಿಗಳ ಸಾಹಿತ್ಯ ಮತ್ತು ಅರ್ಥಗಳನ್ನು ಮಾತ್ರ ಕೊಟ್ಟಿದೆ. ಅವುಗಳ ಸ್ವರಪ್ರಸ್ತಾರವನ್ನು ಬೇರೆ ಭಾಗವಾಗಿಯೇ ಅದೇ ಅನುಕ್ರಮದಲ್ಲಿ ಕೊಟ್ಟಿದೆ.